ಶ್ರೀಃ.

# ತರಂಗಿಣೀ

(ವಿವಿಧ ಕಥಾ ಮಾಸ ಪುಸ್ತಕಾವಳಿ)

---



# ಅಮೃತಗರಲ.

ಬಾಲ ಸರಸ್ವತಿಯವರಿಂದ

ವಿರಚಿತವಾದುದು.



PRINTERS,

**INDIRA PRINTING WORKS**

Bangalore City.

೧೨|| ಸಂ|| ಪುಷ್ಯ ಕ್ರಯ ೩ ಆಣೆ.

# ವಿಜ್ಞಾಪನೆ.

ಸ್ವಾಮಿನ್, ಕಾಲದೇಶಾನುಗುಣವಾದ ಅನೇಕ ಪ್ರತಿಬಂಧಕಗಳಿಂದ, ಈ ಗ್ರಂಥವು ನಿಯಮಿತಕಾಲದಲ್ಲಿ ಪ್ರಕಾಶಿತವಾಗಲು ಅವಕಾಶವಾಗಲಿಲ್ಲ. ಲೋಕಸ್ಥಿತಿಯನ್ನರಿತ ಮಹನೀಯರಾದ ತಾವು ಈ ಅಲ್ಪವಾದ ಲೋಪವನ್ನು ಕ್ಷಮಿಸಬೇಕು. ಗ್ರಂಥಗಳು ಸಕಾಲದಲ್ಲಿ ಮುದ್ರಿತವಾಗುವುದಕ್ಕೆ ತೊಂದರೆಗಳು ಸಂಭವಿಸಬಹುದಾದರೂ, ಉದ್ದಿಷ್ಟವಾದ ಭಾಷಾಸೇವೆಯು ಮಾತ್ರ ಅವಿಚ್ಛಿನ್ನವಾಗಿ ನಡೆಯಿಸಲ್ಪಡುವ ಬಗೆಗೆ ತಾವೂ ತಮ್ಮ ಮಿತ್ರರೂ ಏಕವಾಕ್ಯತಯಾ ಸಹಾಯರಾಗಬೇಕೆಂದು ಪದೇ ಪದೇ ಪ್ರಾರ್ಥಿಸುವೆನು.

ವಶಂವದ,

ಎಂ. ಎಲ್. ಕೃಷ್ಣಮೂರ್ತಿ,

ಕಾರ್ಯಾಧ್ಯಕ್ಷ,

ಸರಸ್ವತೀ ಪೀಠಂ, ಬೆಂಗಳೂರು ಸಿಟಿ.

ಜಯತು ಭಗವಾನ್



# ಅಪ್ರಾತಗ್ಗರಲ



## ಒಂದನೆಯ ಸಂಧಿ.

### ಯುವಕರು.

ರಜನಿಯು ನಿರ್ಮಲವಾಗಿದ್ದಿತು. ಅಪಾರವಾದ ಗಗನಸಾಗರದಲ್ಲಿ ಚಂದ್ರನು ನಗುತ ನಗುತ ಎಲ್ಲಿಯೋ ತೇಲಿಹೋಗುತ್ತಿದ್ದನು. ಅಸಂಖ್ಯಾತವಾದ ನಕ್ಷತ್ರಗಳು ಆಗತಾನೇ ಅರಳಿದ ಕುಸುಮದಂತೆ ತಂತಮ್ಮ ಅಲ್ಪಕಾಂತಿಯನ್ನು ತೋರ್ಪಡಿಸುತ್ತಿದ್ದುವು. ಸರಸವಾದ ವಸಂತವಾಯುವು ಮೆಲ್ಲಮೆಲ್ಲನೆ ಕಾಮುಕರ ಹೃದಯವನ್ನು ಅಪಹರಿಸಿ ಕಳ್ಳನಂತೆ ಎಲ್ಲಿಯೋ ಕಣ್ಮರೆಯಾಗಿ ತಪ್ಪಿಸಿಕೊಂಡು ತಿರುಗಾಡುತ್ತಿದ್ದಿತು. ಪೃಥಿವಿಯು ಶುಕ್ಲಾಂಬರವನ್ನು ಧಾರಣಮಾಡಿ, ಅದಾವುದೋ ವ್ರತವನ್ನು ಕೈಗೊಂಡಿರುವಂತೆ ಕಾಣಿಸಲಾರಂಭಿಸಿತು.

ಇಂತಹ ಸಮಯದಲ್ಲಿ ಯುವಕರಿಬ್ಬರು ಒಂದು ರಮಣೀಯವಾದ ಉದ್ಯಾನದ ಸರೋವರದ ತೀರದಲ್ಲಿ ಶ್ವೇತಶಿಲೆಯಿಂದ ನಿರ್ಮಿತವಾಗಿದ್ದ ಸೋಪಾನಾವಳಿಗಳ ಮೇಲೆ ಕುಳಿತುಕೊಂಡು, ಪದತಲದಲ್ಲಿ ಆಂದೋಳಿತವಾಗುತ್ತಿದ್ದ ಸರಸ್ಸಿನ ಜಲರಾಶಿಯ ಸೊಬಗನ್ನು ನೋಡುತ್ತಿದ್ದರು. ಕ್ರೀಡಾಲೋಲರಾದ ಬಾಲಕರು ಅಲ್ಲಲ್ಲಿ ಓಡಾಡಿ ಬೇಸತ್ತು ಸ್ವಲ್ಪಹೊತ್ತು ವಿಶ್ರಾಂತಿಗೋಸುಗ ಹೇಗೆ ಒಂದು ಕ್ಷಣಕಾಲ ಸುಮ್ಮ

ನಿದ್ದು ಪುನಃ ಕುಣಿದಾಡಲುಪಕ್ರಮಿಸುವರೋ, ಅದರಂತೆಯೇ ಚಂದ್ರನು ಸರಸ್ಸಿನ ವಕ್ಷದ ಮೇಲೆ ಬಗೆಬಗೆಯಾಗಿ ವಿಹರಿಸುತ್ತಲೂ, ಮಧ್ಯೇಮಧ್ಯೇ ಕ್ಷಣಕಾಲ ಸ್ಥಿರಭಾವದಿಂದಿರುತಲೂ, ಪುನಃ ಮೊದಲಿನಂತೆ ಕ್ರೀಡಿಸುತ್ತಲೂ, ನೋಟಕರಿಗೆ ಆನಂದವನ್ನುಂಟುಮಾಡುತಿದ್ದನು. ಉದ್ಯಾನದಲ್ಲಿ ಕಾಲವಿಕಸಿತವಾದ ಕುಸುಮ ಸಮೂಹವು ಮುಕ್ತಹಸ್ತನಾದ ದಾತನಂತೆ, ತಮ್ಮತಮ್ಮ ಸೌರಭವನ್ನು ನಿರಾತಂಕವಾಗಿ ಜಗಕೆಲ್ಲ ಬೀರುತಿದ್ದಿತು. ವಾಯುವೆಂಬ ಯಾಚಕನು ಹೊರಲಾರದಷ್ಟು ಮಕರಂದವನ್ನು ಹೊತ್ತುಕೊಂಡು ಅತಿಪ್ರಯಾಸದಿಂದ ಮೆಲ್ಲಮೆಲ್ಲನೆ ತನ್ನ ಮನೆಯನ್ನು ಕುರಿತು ತೆರಳುತಿದ್ದನು. ವಾಯುವು ಯಾಚಕನಾದರೂ ಬಲು ರಸಿಕನು. ಮಾರ್ಗದಲ್ಲಿ ಪುಷ್ಪಗಳನ್ನು ಒಂದರಮೇಲೆ ಮತ್ತೊಂದನ್ನು ತಳ್ಳುತಲೂ, ಮತ್ತೆ ಅವೆರಡನ್ನೂ ದೂರಮಾಡುತಲೂ, ಪುಷ್ಪಗಳ ಅಧೀರತೆಯನ್ನು ನೋಡಿ ಕಿಲಕಿಲ ನಗುತ ತನ್ನ ಆಯಾಸವನ್ನು ಪರಿಹಾರಮಾಡಿಕೊಂಡು ತೆರಳುತಿದ್ದನು.

ಯಾಚಕರಿಗೆ ಉಚ್ಚನೀಚಗಳೆಂಬ ಭೇದವಿಲ್ಲ. ಅವರು ಎಲ್ಲರಲ್ಲಿಯೂ ಸ್ವೇಚ್ಛೆಯಿಂದವಾಗಿ ಪ್ರವರ್ತಿಸುವರು. ಅವರಿಗೆ ಯಾರ ಲಕ್ಷ್ಯತಾನೇ ಉಂಟು? ಒಬ್ಬರಲ್ಲ, ಮತ್ತೊಬ್ಬರು ಅವರ ಕಷ್ಟವನ್ನು ನೋಡಿ ಕನಿಕರ ಪಡುವರು. ಹೀಗಿರುವಲ್ಲಿ ಯಾಚಕರು ಯಾರಿಗೆ ಭಯಪಡುವ ಸಂಭವವಿರುವುದು? ಆದುದರಿಂದಲೇ ಅವರು ಮಾಡುವುದಕ್ಕೆ ಕೆಲಸವಿಲ್ಲದೆ ಒಬ್ಬರಮೇಲೆ ಮತ್ತೊಬ್ಬರನ್ನು ಎತ್ತಿ ಸಾಕುವರು; ಕೊಟ್ಟವರನ್ನು ಭೂಷಿಸುವರು, ಕೊಡದವರನ್ನು ದೂಷಿಸುವರು, ಜಗವನ್ನೆಲ್ಲವನ್ನೂ ನಿರ್ಲಕ್ಷ್ಯವಾಗಿ ಕಾಣುವರು. ವಾಯುವಾದರೋ ಯಾರನ್ನೂ ಉಪೇಕ್ಷೆಮಾಡುವುದಿಲ್ಲ. ಭಾಗ್ಯವಂತರಾಗಲಿ, ದರಿದ್ರರಾಗಲಿ, ಎಲ್ಲರನ್ನೂ ಸಮಭಾವದಿಂದ ಕಾಣುವುದು. ಒಂದೊಂದುವೇಳೆ ದರಿದ್ರನ ಕುಟೀರದೊಳಗೆ ಪ್ರವೇಶಿಸಿ ಮಕ್ಕ

ಳಂತೆ ಎಲ್ಲೆಲ್ಲಿಯೂ ಸುತ್ತುವುದು. ತಿಂಡಿಗೋಸುಗ ಕಾಡುವ ಮಕ್ಕಳಂತೆ, ತಾಯಿಯ ಸೆರಗನ್ನು ಹಿಡಿದೆಳೆಯುವುದು ; ತಂದೆಯ ಬೆನ್ನಿನ ಮೇಲೆ ಹತ್ತುವುದು ; ನೆಲದಮೇಲೆಲ್ಲ ಬಿದ್ದು ಒದ್ದಾಡುವುದು ಒಂದೊಂದುವೇಳೆ ಬಲ್ಲಿದನ ಮನೆಯೊಳಗೆ ಹೇಳದೇ ಕೇಳದೇ ನುಗ್ಗುವುದು ; ಕಾವಲುಗಾರರು ಎಷ್ಟೇ ತಡೆದರೂ, ಅವರನ್ನು ಕೊಂಚವೂ ಲಕ್ಷ್ಯಮಾಡುವುದಿಲ್ಲ ; ಅರ್ಧಮುಚ್ಚಿದ ಬಾಗಿಲುಗಳನ್ನು ದಢೀರೆಂದು ಹಾರಬಡಿಯುವುದು ; ಕಿಟಕಿಗಳನ್ನು ಮುಚ್ಚುವುದು ; ಮೇಜಿನ ಮೇಲಿದ್ದ ಸಾಮಾನುಗಳನ್ನು ಕೆಳಗೆ ತಳ್ಳುವುದು ; ಬಟ್ಟೆಗಳನ್ನು ಹಾರಿಸುವುದು. ಇಷ್ಟೇ ಅಲ್ಲದೆ ಅಂತಃಪುರದಲ್ಲಿ ಪ್ರವೇಶಮಾಡಿ ಸ್ತ್ರೀಯರ ಕೂದಲನ್ನು ಕುಣಿಸುವುದು, ಸೆರಗನ್ನು ಹಾರಿಸುವುದು, ಕಿವಿಯಹತ್ತಿರ ಹೋಗಿ ಏನೋ ಮಾತನಾಡುವುದು ; ಮುಖವನ್ನು ಚುಂಬಿಸುವುದು, ಇವೇ ಮೊದಲಾದ ಅತ್ಯಾಚಾರಗಳನ್ನು ಮಾಡುವುದು. ಆದರೆ ಯಾರೂ ವಾಯುವಿನ ವಿಷಯದಲ್ಲಿ ಕೋಪಗೊಂಡಂತೆ ನಾನೆಲ್ಲಿಯೂ ಕೇಳಿಲ್ಲ. ವಾಯುವು ಏನೇನು ಮಾಡಿದರೂ ಎಲ್ಲರಿಗೂ ಹಿತವಾಗಿಯೇ ಇರುವುದು. ಲೋಕದಲ್ಲಿ ವಾಯುವೇ ಧನ್ಯನು. ವಾಯುವಿಗೆ ಗೋಚರವಾಗದ ಸ್ಥಳವೇ ಇಲ್ಲ. ಏಕಾಂತವಾಗಿ ಉದ್ಯಾನದಲ್ಲಿ ಯುವಕರಿಬ್ಬರು ಮಾತನಾಡುತ್ತ ಕುಳಿತಿದ್ದರೆ, ವಾಯುವು ಅಲ್ಲಿಗೂ ಕಾಣದೇ ಹೋಗಿ, ಯುವಕನ ವಸ್ತ್ರವನ್ನು ಯುವತಿಯ ಮೇಲೂ. ಯುವತಿಯ ಕೇಶರಾಶಿಯನ್ನು ಯುವಕನ ಮೇಲೂ ಹಾಕಿ ಯಾರಾದರೂ ಬೈದಾರೆಂಬ ಭಯದಿಂದ ಎಲ್ಲಿಯೋ ಓಡಿಹೋಯಿತು. ಯುವಕ ಯುವತಿಯರು ಇದಾವುದನ್ನೂ ಲಕ್ಷ್ಯ ಮಾಡದೆ ಮಾತನಾಡುತ್ತ ಕುಳಿತಿದ್ದರು. ಮಾತನಾಡುತ್ತಲಿದ್ದವರು ಹಠಾತ್ತಾಗಿ ಮಾತುಕತೆಗಳನ್ನು ನಿಲ್ಲಿಸಿ ಸುಮ್ಮನಾದರು. ಒಬ್ಬ

ಹೊತ್ತಿಸಿದ ಮೇಲೆ ಯುವತಿಯು ಯುವಕನನ್ನು ಕುರಿತು—ಸ್ವಾಮಿನ್, ಮನುಷ್ಯನು ಸತ್ತಮೇಲೆ ಏನಾಗುವನು ? ಎಂದು ಕೇಳಿದಳು.

ಶರಚ್ಚಂದ್ರ—ಅದೇತಕೆ ಹೀಗೆ ಕೇಳುವೆ ?

ವಿನೋದಿನಿ— ( ಅಂತರಿಕ್ಷವನ್ನು ನೋಡುತ ) ನಾನೊಂದು ವೇಳೆ ಸತ್ತರೆ ?

ಶರತ್—ಇದೇನು ವಿನೋದ ! ನಿನ್ನ ಮನದಲ್ಲಿ ಇಂತಹ ದುಶ್ಚಿಂತೆಯು ಉಂಟಾದ ಬಗೆ ಹೇಗೆ ?

ವಿನೋದಿನಿ—ಯಾರುಬಲ್ಲರು, ಹಣೆಯ ಬರಹವನ್ನು ಕಂಡವ ರಾರು ? ಆದುದರಿಂದಲೇ ನಾನು ನಿನ್ನನ್ನು ಕೇಳುವೆನು. ನಾನೀಗ ಸಾಯುವುದಾದರೆ, ನಾನೇನಾಗುವೆನು ?

ಶರತ್—ನೀನೊಬ್ಬಳೇ ಸಾಯಲಾರೆ. ನೀನು ಸಾಯುವು ದಾದರೆ ನಿನ್ನೊಡನೆ ಮತ್ತೊಬ್ಬನೂ ಸಾಯಲು ಸಿದ್ಧನಾಗಿರುವನು. ಅನಂತರ ಇಬ್ಬರೂ ಸ್ವರ್ಗದಲ್ಲಿ ಅಕ್ಷಯ ಭೋಗವನ್ನು ಅನುಭವಿ ಸುವರು.

ವಿನೋದಿನಿ—(ಸ್ವಲ್ಪನಕ್ಕು) ಆತನಾರು ?

ಶರತ್—ನಿನಗೆ ಗೊತ್ತಿಲ್ಲವೇ ? ಆತನು ನಿನ್ನ ಪಕ್ಕದಲ್ಲಿಯೇ ಕುಳಿತಿರುವನು.

ವಿನೋದಿನಿ—ಯಾರು, ಶರಚ್ಚಂದ್ರನೇ !

ಶರತ್—ಹಾಗಾದರೆ ನನ್ನಲ್ಲಿ ನಿನಗೆ ವಿಶ್ವಾಸವಿಲ್ಲವೆ ?

ವಿನೋದಿನಿ—ಇಲ್ಲ, ನೀನು ಬಲು ದುಷ್ಟನು. ನೋಡು, ನೀನೆಂತಹ ಕೆಲಸಮಾಡಿದೆ ? ಕಳೆದ ಸಲ ನೀನು ವಿದ್ಯಾನಗರಕ್ಕೆ ಹೋಗು ವಾಗ, ನನ್ನನ್ನು ಸಂಗಡ ಕರೆದುಕೊಂಡು ಹೋಗಬೇಕೆಂದು ನಾನೆಷ್ಟು ಬೇಡಿಕೊಂಡರೂ, ನಿನಗೆ ದಯೆಬಾರದೇ ಹೋಯಿತು. ನೀನು ಹೊರಡುವಾಗ ಮತ್ತೊಂದು ಸಲ ಕರೆದುಕೊಂಡು ಹೋಗು

ವೆನೆಂದು ನನಗೆ ಆಸೆಯನ್ನು ತೋರಿಸಿದುದು ನಿನಗೆ ಇನ್ನೂ ಜ್ಞಾಪಕದಲ್ಲಿರಬಹುದು. ಈಸಲ ನೀನು ಬಂದಿರುವೆ. ಈಗಲಾದರೂ ನನ್ನನ್ನು ಕರೆದುಕೊಂಡು ಹೋಗುವೆಯಾದರೆ ಸರಿ, ಇಲ್ಲವಾದರೆ ನಾನೇ ನಿನ್ನ ಜತೆಯಲ್ಲಿ ಹೊರಟು ಬಂದು ಬಿಡುವೆನು. ಅನಂತರ ನೀನು ಕೋಪ ಮಾಡಿದರೆ ನಾನು ಕೇಳತಕ್ಕವಳಲ್ಲ. ನಿನ್ನ ಅಭಿಪ್ರಾಯವಾದರೋ ಈಗಲೂ ನನ್ನನ್ನು ಕರೆದುಕೊಂಡು ಹೋಗಕೂಡದೆಂದಿರುವ ಹಾಗೆ ಕಂಡುಬರುವುದು. ಹಾಗೆ ಏಕಾಂಗಿಯಾಗಿ ನೀನು ಹೊರಡಬಹುದಾದರೆ ಹೊರಡು. ನನ್ನ ಅಡ್ಡಿ ಇರುವುದಿಲ್ಲ, ಆದರೆ ನನ್ನ ಪ್ರಾಣವೂ ನಿನ್ನ ಜತೆಯಲ್ಲಿಯೇ ಖಂಡಿತವಾಗಿಯೂ ಹೊರಟೇ ಹೋಗುವುದು.

ಶರತ್—ವಿನೋದ! ನಿನ್ನನ್ನು ಕರೆದುಕೊಂಡು ಹೋಗಕೂಡದಷ್ಟು ನನಗೆ ನಿನ್ನಲ್ಲಿ ವಿರೋಧವೇನೂ ಇಲ್ಲ; ಆದರೆ ಈ ಸಲ ನನಗೆ ಪರೀಕ್ಷೆಯ ಕಾಲ, ನಾನು ವಿಶೇಷವಾಗಿ ಓದಬೇಕಾಗಿರುವುದು.

ವಿನೋದಿನಿ—ಪರೀಕ್ಷೆ! ಈ ಹಾಳು ಪರೀಕ್ಷೆಯಿಂದ ನಿನಗಾವುದೇನು? ಯಾರು ಅಧಿಕಾರ ಪಡೆಯಬೇಕೆಂದಾಗಲಿ, ದ್ರವ್ಯವನ್ನು ಸಂಪಾದಿಸಬೇಕೆಂದಾಗಲಿ, ವಿದ್ಯಾರ್ಜನೆಮಾಡುವರೋ, ಅಂತಹವರಿಗೆ ಪರೀಕ್ಷೆಯೂ, ಉಪಾಧಿಗಳೂ (titles) ಆವಶ್ಯಕವು. ಜ್ಞಾನ ಸಂಪಾದನೆಗಾಗಿ, ಸಂಸಾರದ ಪ್ರಯೋಜನಕ್ಕಾಗಿ, ಯಾರು ಓದುವರೋ, ಅಂತಹವರಿಗೆ ಪರೀಕ್ಷೆಯಿಂದ ಪ್ರಯೋಜನವೇನೂ ಕಂಡು ಬರುವುದಿಲ್ಲ.

ಶರತ್—ವಿನೋದ! ನೀನು ಹೇಳುವುದು ಸುಳ್ಳಲ್ಲ, ಆದರೆ ಯಾವ ಉದ್ದೇಶದಿಂದ ನಾನು ವೈದ್ಯಶಾಸ್ತ್ರವನ್ನು ಅಭ್ಯಾಸಮಾಡುತಲಿರುವೆನೋ ಅದಕ್ಕೆ ಉಪಾಧಿಯಿಂದ ವಿಶೇಷ ಪ್ರಯೋಜನವುಂಟು.

ವಿನೋದಿನಿ—ನನಗೇನೋ ಪ್ರಯೋಜನ ಕಂಡುಬರುವುದಿಲ್ಲ. ದ್ರವ್ಯಸಂಪಾದನೆಯಾಗಲಿ ಚಾಕರಿಯಾಗಲಿ ನಿನಗೆ ಉದ್ದೇಶವಲ್ಲ.

'ಲೋಕಕ್ಕೆ ಉಪಕಾರ ಮಾಡುವುದಕ್ಕಿಂತಲೂ ಪರಮಧರ್ಮವಾವುದೂ ಇಲ್ಲ. ರೋಗಿಗಳನ್ನು ರೋಗದಿಂದ ಮುಕ್ತರನ್ನಾಗಿ ಮಾಡುವುದೇ ಉಪಕಾರದ ಪರಾಕಾಷ್ಠೆ' ಎಂದು ನೀನು ಹೇಳಬಹುದು, ಇದಕ್ಕಾಗಿಯೇ ನೀನು ಇಷ್ಟುಕಷ್ಟಪಟ್ಟು ವಿದ್ಯಾನಗರದಲ್ಲಿ ವಿದ್ಯಾವ್ಯಾಸಂಗಮಾಡುವುದು? ಇಲ್ಲ, ನನಗೆ ಇನ್ನೇನೋ ಬೇರೆ ಉದ್ದೇಶವಿರಬಹುದೆಂದು ತೋರುವುದು.

ಶರತ್—(ನಕ್ಕು)ನನಗೆ ಬೇರೆಯಾದ ಯಾವ ಉದ್ದೇಶವೂ ಇಲ್ಲ. ಪರೀಕ್ಷೆಯಿಂದ ಪ್ರಯೋಜನವೇನೆಂಬುದನ್ನು ಹೇಳುವೆನು, ಕೇಳು. ಪರೀಕ್ಷೆಯಾಗದಿದ್ದರೆ, ಕಲಿತ ಕಲಸವು ಸರಿಯಾಗಿ ಪ್ರೌಢ್ಯಸಿತೆಂದು ಜನಗಳಿಗೆ ಬೋಧೆಯಾಗುವುದಿಲ್ಲ. ಶಾಸ್ತ್ರಪರಿಚಯವು ಇದೆಯೋ, ಇಲ್ಲವೋ, ಎಂಬುದೇ ಜನಗಳಿಗೆ ಗೊತ್ತಾಗದೆ, ನಮ್ಮಲ್ಲಿಗೆ ಯಾರೂ ಉಪಕಾರ ಹೊಂದುವುದಕ್ಕೆ ಬರುವುದಿಲ್ಲ. ಇದರಿಂದ ನಮ್ಮ ಪ್ರಯತ್ನವೆಲ್ಲವೂ ನೀರಿನಲ್ಲಿ ಹೋಮಮಾಡಿದಂತಾಗುವುದು. ಈಗಿನ ಕಾಲದಲ್ಲಿ ಜನಗಳಿಗೆ ಪರೀಕ್ಷೆಯಲ್ಲಿ ನಂಬುಗೆಯಿರುವುದರಿಂದ ಅವರ ತೃಪ್ತಿಗೋಸುಗವಾಗಿಯಾದರೂ ನಾನು ಪರೀಕ್ಷೆಯಲ್ಲಿ ತೇರ್ಗಡೆಯನ್ನು ಹೊಂದಲೇ ಬೇಕಾಗಿರುವುದು. ಪರೀಕ್ಷೆಯಲ್ಲಿ ಉತ್ತೀರ್ಣನಾದ ಮಾತ್ರವೇ ಜ್ಞಾನವಂತನಾಗುವನೆಂದರ್ಥವಲ್ಲ, ಆದರೂ ನಾನು ಪರೀಕ್ಷೆಯಲ್ಲಿ ತೇರ್ಗಡೆಯನ್ನು ಹೊಂದಲೇಬೇಕು.

ವಿನೋದಿನಿಯು ಮಾತನಾಡುವುದಕ್ಕೆ ತೋರದವಳಾಗಿ ಸುಮ್ಮನಿದ್ದುಬಿಟ್ಟಳು. ಶರಚ್ಚಂದ್ರನು ಪುನಃ ಹೇಳತೊಡಗಿದನು-ವಿನೋದ! ಇದಕ್ಕಾಗಿಯೇ ನಾನು ನಿನ್ನನ್ನು ಬಿಟ್ಟು ಹೋಗಬೇಕೆಂದಿರುವೆನೇ ಹೊರತು ಮತ್ತಾವ ಕಾರಣವೂ ಇರುವುದಿಲ್ಲ. ನಿನ್ನನ್ನು ಬಿಟ್ಟು ಹೋಗುವುದರಿಂದ ನನಗೆ ಏನು ತಾನೇ ಸುಖವಿರುವುದು? ನಿನ್ನನ್ನು ಬಿಟ್ಟು ವಿದ್ಯಾನಗರದಲ್ಲಿ ಏಕಾಂಗಿಯಾಗಿರುವ ನನ್ನ ಸಂಕಟವಾವದೋ

ದೇವರೊಬ್ಬನಿಗೇ ಗೊತ್ತು. ಇಲ್ಲಿ ನಿನಗೆ ಎಷ್ಟು ಕಷ್ಟವೋ, ಅದಕ್ಕೆ ನೂರರಷ್ಟು ನಾನು ಕಷ್ಟವನ್ನನುಭವಿಸುವೆನೆಂದು ಹೇಳಿದರೂ ಅತ್ಯುಕ್ತಿಯಾಗಲಾರದು.

ವಿನೋದಿನಿ— ನೀನು ಬಲು ಹಠಗಾರನು.

ಶರತ್— ಅದು ಹೇಗೆ?

ವಿನೋದಿನಿ— ಅಷ್ಟು ಯಾತನೆಯನ್ನಾದರೂ ಅನುಭವಿಸುತ್ತಾ, ಏಕಾಂಗಿಯಾಗಿ ಏತಕ್ಕೆ ಇರಬೇಕು? ನನ್ನನ್ನು ಕರೆದುಕೊಂಡು ಹೋದಮಾತ್ರಕ್ಕೆ ನಿನಗೆ ತೊಂದರೆಯಾಗುವುದೇನು?

ಶರತ್— ಈಸಲ ನಾನು ವಿಶೇಷವಾಗಿ ಓದಬೇಕು. ಇಲ್ಲಿ ಬಿಟ್ಟರೆ ಗತಿಮುಟ್ಟುವ ಸಂಭವವಿಲ್ಲ. ನಿನ್ನನ್ನು ಕರೆದುಕೊಂಡು ಹೋದಲ್ಲಿ, ನನ್ನ ಓದುಗಾರಿಕೆಯು ಕೊಂಚವೂ ಸಾಗದು.

ವಿನೋದಿನಿ— (ಕೋಪದಿಂದ) ನಿನ್ನ ಓದುಗಾರಿಕೆಯನ್ನು ಸುಟ್ಟರು.

ಶರಚ್ಚಂದ್ರನು ವಿನೋದಿನಿಯನ್ನು ಪ್ರೀತಿಯಿಂದ ಆಲಿಂಗಿಸಿ— ವಿನೋದಿನಿ,- ನೀನು ಹುಚ್ಚಿ, ಎಂದನು.

ಈ ಮಾತುಗಳು ನಡೆಯುತ್ತಿರುವಾಗ ಇವರ ಹಿಂದುಗಡೆ ಭುವನ ಮೋಹಿನಿಯಾದ ಒಂದು ಸುಂದರೀಮೂರ್ತಿಯು ನಿಂತಿದ್ದಿತು. ಯುವಕಯುವತಿಯರಿಗೆ ಇದಾವುದೂ ಗೊತ್ತಾಗಲಿಲ್ಲ. ಹಿಂದೆ ನಿಂತಿದ್ದ ವ್ಯಕ್ತಿಗೆ ಸುಮಾರು ಹದಿನೆಂಟು ವರ್ಷ ವಯಸ್ಸು ಇದ್ದಿರಬಹುದು. ಆ ವ್ಯಕ್ತಿಯ ದೇಹದಲ್ಲಿ ಆಭರಣವಾವುದೂ ಕಾಣಬರುತ್ತಿರಲಿಲ್ಲ. ವಿಧಾತನು ಆವ ದೇಹದಲ್ಲಿ ಅತುಲವಾದ ರೂಪರಾಶಿಯನ್ನು ಅರ್ಪಣೆ ಮಾಡಿದ್ದನೋ, ಆ ದೇಹಕ್ಕೆ ಅಲಂಕಾರದಿಂದಾಗುವುದೇನು? ಆ ಸುಂದರಿಯು ಏಕಮಾತ್ರಾಭರಣವಾಗಿದ್ದ ಪತಿಯನ್ನು ಕಳೆದುಕೊಂಡು ವಿಧವೆಯಾಗಿದ್ದಳು. ವಿಧವೆಯು ಬಹಳ ಹೊತ್ತು ಅಲುಗಾಡದೆ

ನಿಂತಿರಲು, ಆಕೆಯ ಮುಖದಲ್ಲಿ ಕೋಪವೂ ಅಸೂಯೆಯೂ ಪರಸ್ಪರ ಜಯಾಪೇಕ್ಷೆಯುಳ್ಳವುಗಳಾಗಿ ತೋರಿಬರುತಿದ್ದುವು. ಆಕೆಯು ತನ್ನ ಹೃದಯದಲ್ಲಿ ಉಂಟಾದ ಯಾತನೆಯನ್ನು ಸಹಿಸಲಾರದವಳಾಗಿ—ಇದೇನು, ಯಾರು ಮಾಡುವ ಕೆಲಸ? ಈಗಲೀಗ ಜನ್ಮವು ಸಾರ್ಥಕವಾಯಿತು, ಎಂದು ಅರಚಿದಳು.

ಯುವಕ ಯುವತಿಯರು ಬೆಚ್ಚಿದವರಾಗಿ ಎದ್ದು ನಿಂತರು. ವಿನೋದಿನಿಯು ನಾಚಿಕೆಯಿಂದ ತಲೆಬಾಗಿದವಳಾಗಿ-ಅಕ್ಕ! ಇದೇನು ಇಷ್ಟುಹೊತ್ತಿನಲ್ಲಿ ಇಷ್ಟುದೂರ ಬಂದುದು ? ಎಂದಳು.

ಅಕ್ಕ—ವಿನೋದ ! ನಿನಗೆ ನಾಚಿಕೆಯೆಂಬುದೇ ಇಲ್ಲ.

ವಿನೋದಿನಿಯು ಮುಖಕ್ಕೆ ಅವಗುಂಠನವನ್ನು ಎಳೆದುಕೊಂಡು ಶರಚ್ಚಂದ್ರನನ್ನು ಬಿಟ್ಟು ದೂರವಾಗಿ ಹೋಗಿನಿಂತಳು. ಶರಚ್ಚಂದ್ರನು ವಿನೋದಿನಿಯ ಅಕ್ಕನನ್ನು ನೋಡಿ—ನಿಜಕ್ಕೆ ನಾಚಿಕೆ, ನಾಚಿಕೆ ಪಡುವುದಕ್ಕೆ ಕಾರಣವೇನಿರುವುದು? ಎಂದನು.

ವಿನೋದಿನಿಯ ಅಕ್ಕನಾದ ವಿಲಾಸಿನಿಯು ನಿಟ್ಟುಸಿರನ್ನುಬಿಟ್ಟು ತಂಗಿಯನ್ನು ಕುರಿತು— ಎಲಾ! ಅಮ್ಮನು ನಿನ್ನನ್ನು ಬಹಳ ಹೊತ್ತಿನಿಂದಲೂ ಕೂಗುತ್ತಲಿರುವಳು. ನಿನ್ನನ್ನು ಎಲ್ಲೆಲ್ಲಿಯೂ ಹುಡುಕಿ ಹುಡುಕಿ ಸಾಕಾಯಿತು. ಉಪಾಧ್ಯಾಯನು ಬಂದು ಬಹಳ ಹೊತ್ತಿನಿಂದಲೂ ಕಾದಿರುವನು. ನಿನಗೆ ಕೊಂಚವೂ ಗೊತ್ತಾಗುವುದಿಲ್ಲ, ಎಂದು ಗದರಿಸಿದಳು.

ವಿನೋದಿನಿಯು ಮತ್ತಾವ ಮಾತನ್ನೂ ಆಡದೆ, ಆ ಸ್ಥಳವನ್ನು ಬಿಟ್ಟು ಮನೆಯ ಕಡೆಗೆ ಹೊರಟುಹೋದಳು.



# ಎರಡನೆಯ ಸಂಧಿ

## ಮು ರಾ ಶೆ.

ವಿನೋದಿನಿಯು ಹೊರಟುಹೋದನಂತರ ವಿಲಾಸಿನಿಯು ಶ್ವೇತಶಿಲೆಯ ಸೋಪಾನದ ಮೇಲೆ ರಾಜರಾಜೇಶ್ವರಿಯಂತೆ ಕುಳಿತುಕೊಂಡಳು. ನಿರ್ಮಲವಾದ ಚಂದ್ರಿಕೆಯೂ, ಕ್ರೀಡಾಶೀಲವಾದ ವಸಂತವಾಯುವೂ, ವಿಕಸಿತವಾದ ಕುಸುಮ ಸಮೂಹವೂ, ಪ್ರಶಾಂತವಾದ ಸರೋವರದ ಜಲರಾಶಿಯೂ, [illegible]ಮಯಿಯಾದ ಪ್ರಕೃತಿಯೂ, ವಿಲಾಸಿನಿಯು ಆಗಮನದಿಂದ [illegible]ಂತಲೂ ಅಧಿಕವಾಗಿ ಪ್ರಕಾಶಿಸಲಾರಂಭಿಸಿದವು. ಯಾವ ದೀಪಕಾಂತಿಯಿಂದ ಇತರ ವಸ್ತುಗಳ ಕಾಂತಿಯು ಸಂವರ್ಧಿತವಾಗುವುದೋ, ಅಂತಹ ದೀಪಕಾಂತಿಯೇ ಕಾಂತಿ; ಯಾವ ಸೌಂದರ್ಯದಿಂದ ಇತರ ವಸ್ತುವಿನಲ್ಲಿ ಸೌಂದರ್ಯವು ಪೂರ್ವಾಧಿಕವಾಗಿ ಉಜ್ಜ್ವಲಿತವಾಗುವುದೋ, ಅಂತಹ ಸೌಂದರ್ಯವೇ ಸೌಂದರ್ಯ, ವಿಲಾಸಿನಿಯು ಉಪವನವಲ್ಲಿ ಪ್ರವೇಶಿಸಿದೊಡನೆಯೇ ಪ್ರಕೃತಿಯು ಅಪೂರ್ವ ಶೋಭಾರಾಶಿಯನ್ನು ಧಾರಣಮಾಡಿದುದನ್ನು ಆವ ಚಕ್ಷುಷ್ಮಂತರು ನೋಡಿನೋಡಿ ತಮ್ಮನ್ನೇ ತಾವು ಮರೆತರೋ, ಅಂತಹವರೇ ಧನ್ಯರು. ವಿಲಾಸಿನಿಯು ಏನೋ ಯೋಚಿಸುತ್ತಲೂ, ವ್ಯಸನಪಡುತ್ತಲೂ, ಒಂದು ಬಗೆಯಾದ ಕೋಪವನ್ನು ತೋರ್ಪಡಿಸುತ್ತಲೂ, ವಿನೋದಿನಿಯು ಕುಳಿತಿದ್ದ ಸ್ಥಳದಲ್ಲಿ ಬಂದು ಕುಳಿತಳು. ವಿಲಾಸಿನಿಯ ಮನೋಭಾವಗಳು ಹೇಗಾದರೂ ಇರಲಿ; ವನದೇವತೆಯು ಮೂರ್ತಿಮತ್ತಾಗಿ ಬಂದು ಕುಳಿತಿರುವಳೋ ಎಂಬಂತೆ ಬೋಧೆಯಾಗುತಿದ್ದಿತು.

ಶರಚ್ಚಂದ್ರನು, ವಿಲಾಸಿನಿಯು ಬಂದಳೆಂದು ಸ್ಥಳಬಿಟ್ಟೇಳದೇ, ಇದ್ದಲ್ಲಿಯೇ ಇದ್ದನು. ವಿಲಾಸಿನಿಯು ಶರಚ್ಚಂದ್ರನೊಡನೆ ಮನೋನೋ

ಮಾತನಾಡಬೇಕೆಂದು ಬಂದಳು ; ಆದರೆ ಅವನನ್ನು ನೋಡಿದೊಡ ನೆಯೇ ಎಲ್ಲವೂ ಅವಳಿಗೆ ಮರೆತುಹೋಯಿತು. ಅವಳ ಹೃದಯ ದಲ್ಲಿ ಯಾವ ಭಾವವುಂಟಾಗಿ ಹೀಗೆಲ್ಲ ಪರಿವರ್ತನೆಯುಂಟಾಯಿತೋ ಅದನ್ನು ಬಲ್ಲವರಾರು? ವಿಧಿಯು ಮನಸ್ಸನ್ನು ಹೀಗೆಯೇ ಸರಿ ಯೆಂದು ನಿರ್ಧರಿಸುವುದು ಆರಿಂದ ಸಾಧ್ಯವಾದೀತು?

ಶರಚ್ಚಂದ್ರನು ಬೇರೆಯಕಡೆ ಮುಖವನ್ನು ತಿರುಗಿಸಿಕೊಂಡು ಏನನ್ನೋ ಯೋಚಿಸುತಿದ್ದನು. ವಿಲಾಸಿನಿಯ ಮುಖದಲ್ಲಿ ಕಂಡು ಬರುತಿದ್ದ ಮನೋವಿಕಾರಗಳೆಲ್ಲವೂ ಕ್ರಮವಾಗಿ ಎಲ್ಲಿಯೋ ಮಾಯ ವಾಗಿ ಹೋದುವು. ಕೃತ್ರಿಮವಾದ ಕೋಪತಾಪಗಳು ಸರಳ ಹೃದಯಳಾದ ಸುಂದರಿಯ ಹೃದಯದಲ್ಲಿ ಎಷ್ಟು ಹೊತ್ತು ತಾನೇ ಸ್ಥಾಯಿಯಾಗಿ ನಿಲ್ಲುವುವು!

ಶರಚ್ಚಂದ್ರನು ಸುಂದರಿಯನ್ನು ಕುರಿತು—ವಿಲಾಸ! ನೀನೇ ತಕ್ಕೆ ಇಲ್ಲಿ ಸುಮ್ಮನೆ ಕುಳಿತಿರುವೆ? ಎಂದನು.

ವಿಲಾಸಿನಿಯು ಆ ಪ್ರಶ್ನೆಗೆ ಏನೊಂದುತ್ತರವನ್ನೂ ಕೊಡಲಾರ ದವಳಾಗಿ ಶರತ್ತಿನ ಮುಖವನ್ನೇ ನೋಡುತ ಕುಳಿತುಬಿಟ್ಟಳು. ಶರ ಚ್ಚಂದ್ರನಿಗೆ ಇದರ ಅರ್ಥವೇ ಗೊತ್ತಾಗಲಿಲ್ಲ. ಕೊಂಚಹೊತ್ತಿನ ಮೇಲೆ ವಿಲಾಸಿನಿಯು ಸ್ವಲ್ಪ ಮುಖವನ್ನು ತಿರುಗಿಸಿಕೊಂಡು—ನಿನ್ನ ಜತೆಯಲ್ಲಿಯೇ ಮನೆಗೆ ಹೋಗೋಣವೆಂದು ಕುಳಿತುಕೊಂಡೆನು. ಸ್ವಲ್ಪಕಾಲ ಕುಳಿತುಕೋ, ಮನೆಗೆ ಹೋದರಾಯಿತು, ಎಂದಳು.

ಶರಚ್ಚಂದ್ರನು ಕುಳಿತುಕೊಂಡು—ವಿಲಾಸ, ಅದೇನು ಬಹಳ ವಾಗಿ ಯೋಚಿಸುತಲಿರುವೆ? ಎಂದು ಕೇಳಲಾಗ, ವಿಲಾಸಿನಿಯು, ಏನೋ ಮಾತನಾಡಬೇಕೆಂದಿದ್ದವಳು ಏನೂ ತೋರದವಳಾಗಿ— ಏನೂ ಇಲ್ಲ, ಎಂದುತ್ತರವಿತ್ತಳು.

ಶರತ್—ವಿಲಾಸ! ನೀನು ಹೇಳು, ಹೇಳಿದರೆ. ನಿನ್ನ ಮನದಲ್ಲಿ

ದುರಂತವಾದ ದುಃಖವಿರುವುದೆಂದು ಬೋಧೆಯಾಗುವುದು. ನಾನು ಇದನ್ನು ಚೆನ್ನಾಗಿಯೂ ಬಲ್ಲೆನು. ನೀನು ಇನ್ನೂ ಬಾಲವಿಧವೆ. ನಮ್ಮ ಸಮಾಜದಲ್ಲಿ ವಿಧವೆಯರಿಗೆ ಸಂಭವಿಸಿರುವ ಕಷ್ಟವು ಮತ್ತಾರಿಗುಂಟು? ಕೇವಲ ಬಾಲ್ಯದಲ್ಲಿಯೇ ವಿವಾಹಮಾಡಿ ಕನ್ನೆಯರ ತಲೆಯ ಮೇಲೆ ಬಂಡೆಯನ್ನು ಎಳೆಯುವರು. ಪೂರ್ವಿಕರಿಗೆ ಈಗಿನ ಕಾಲಸ್ಥಿತಿಯು ಗೊತ್ತಾಗುವುದಿಲ್ಲ. ಎಲ್ಲರೂ ಪೂರ್ವದಂತೆಯೇ ಇರುವುದೆಂದು ನಂಬಿ, ಅವರು ಕೆಲಸಮಾಡುವರು. ಅದು ಈಗಿನ ಕಾಲಕ್ಕೆ ವಿರೋಧವಾಗಿಯೇ ಪರಿಣಮಿಸುವುದು. ನಿನಗೆ ವಿವಾಹವಾಗುವ ಕಾಲದಲ್ಲಿ, ನಾನು ಈ ಸಂಗತಿಯನ್ನು ತಿಳಿಯಪಡಿಸಿದೆನು. ಆದರೆ ನನ್ನ ಮಾತನ್ನು ಕೇಳುವವರಾರು? ಲೋಕದಲ್ಲಿ ಜನರು ಸ್ತ್ರೀಯರಿಗೆ ವಿವಾಹವೇ ಪ್ರಧಾನವೆಂದು ತಿಳಿದಿರುವರು. ಆದುದರಿಂದಲೇ ಹೆಂಗಸರಿಗೆ ಮುಂದೆ ಉಂಟಾಗಬಹುದಾದ ಸುಖದುಃಖಗಳನ್ನರಿಯದೇ ಕಾಲಾತೀತವಾಯಿತೆಂದು ಕೈಗೆ ಸಿಕ್ಕಿದ ಪುರುಷವ್ಯಕ್ತಿಗೆ ಗಂಟು ಹಾಕಿಬಿಡುವರು. ಇದರಿಂದ ಎಷ್ಟು ಅನರ್ಥಗಳು ಸಂಭವಿಸುವುವು, ಎಂಬುದನ್ನು ಅವರು ಅರಿಯದೇ ಇರುವುದಕ್ಕಾಗಿ ನಾವು ಎಷ್ಟು ವ್ಯಸನಪಟ್ಟರೂ ಸಾಲದಾಗಿದೆ.

ವಿಲಾಸ ! ನೀನಿನ್ನೂ ಬಾಲೆ, ನಿನಗೆ ಎಲ್ಲರಂತೆಯೇ ಸುಖಪಡಬೇಕೆಂದು ಆಸೆಯಿರುವುದು. ಆದರೆ ನೀನು ವಿಧವೆಯಾಗಿರುವುದರಿಂದ ಸುಖದ ಮಾತೇತಕೆ? ಸುಖಪಡುವುದಕ್ಕೆ ಜಲಾಂಜಲಿಯನ್ನು ಕೊಟ್ಟುಬಿಡು. ಯೌವನದಲ್ಲಿ ಮುಂದೆ ಉಂಟಾಗಬಹುದಾದ ಅನರ್ಥಗಳೂ, ಯುಕ್ತಾಯುಕ್ತ ವಿವೇಚನೆಯೂ ಯಾವುದೂ ಇಲ್ಲದೆ, ಪ್ರಕೃತಸುಖವೇ ಪ್ರಧಾನವೆಂದು ನಂಬಿ, ಜನಗಳು ಕ್ಷಣಿಕ ಸುಖದಲ್ಲಿ ಬಿದ್ದು ಒದ್ದಾಡುವರು. ನೀನೂ ನವಯೌವನೆ. ಧರ್ಮಮಾರ್ಗವನ್ನು ಬಿಡದೇ, ವಿವೇಕದಿಂದ ಮನಸ್ಸನ್ನು ಸ್ವಾಧೀನದಲ್ಲಿಟ್ಟು

ಕುಳಿತಿರಲಿ. ನಾವು ಈ ನವನ್ಯಾಸದಲ್ಲಿ ಪ್ರಧಾನರಾದ ವ್ಯಕ್ತಿಗಳ ಪರಿಚಯವನ್ನು ಮಾಡಿಕೊಳ್ಳೋಣ. ಶರಚ್ಚಂದ್ರನು ಯೋಚಿಸುತ್ತ ಕುಳಿತಿದ್ದರೆ, ನಾವೇತಕೆ ಸುಮ್ಮನೆ ಕುಳಿತಿರಬೇಕು.

ರಂಗಪುರವೆಂಬ ಗ್ರಾಮದಲ್ಲಿ ಸರಸ್ವತೀಪ್ರಸನ್ನನೆಂಬ ಒಬ್ಬ ಸತ್ಕುಲಪ್ರಸೂತನು ವಾಸವಾಗಿರುತ್ತಿದ್ದನು. ಆತನು ಅತುಲವಾದ ಸಂಪತ್ತಿಗೆ ಅಧಿಕಾರಿಯಾಗಿ ರಂಗಪುರದಲ್ಲಿ ಗಣ್ಯನಾಗಿದ್ದನು. ಆತನಿಗೆ ಇಬ್ಬರು ಹೆಣ್ಣು ಮಕ್ಕಳು—ವಿಲಾಸಿನಿ ಮತ್ತು ವಿನೋದಿನಿ. ಎಂಟು ವರ್ಷ ತುಂಬುವುದರೊಳಗಾಗಿಯೇ ವಿಲಾಸಿನಿಗೆ, ವಿದ್ಯಾನಗರದಲ್ಲಿ ವಾಸವಾಗಿದ್ದ ಲಕ್ಷ್ಮೀರಮಣನೆಂಬ ಒಬ್ಬ ಧನಿಕನಾದ ಯುವಕನಿಗೆ ಕೊಟ್ಟು ವಿವಾಹವಾಗಿದ್ದಿತು. ಮದುವೆಯಾದ ವರ್ಷದೊಳಗಾಗಿಯೇ ಲಕ್ಷ್ಮೀರಮಣನು ಪರಲೋಕವನ್ನು ಕುರಿತು ತೆರಳಿದನು. ಒಂಭತ್ತು ವರ್ಷದೊಳಗಾಗಿಯೇ ತ್ರಿಭುವನ ಮನೋಮೋಹಿನಿಯಾದ ವಿಲಾಸಿನಿಯು ಗಂಡನನ್ನು ಕಳೆದುಕೊಂಡು ವಿಧವೆಯಾಗಿ ಮನೆಯಲ್ಲಿ ಕುಳಿತಳು. ವಿಲಾಸಿನಿಯು ಗಂಡನ ಸಮಸ್ತ ಸಂಪತ್ತಿಗೂ ಉತ್ತರಾಧಿಕಾರಿಣಿಯಾದುದಲ್ಲದೇ, ಗಂಡುಮಕ್ಕಳಿಲ್ಲದ ಧನವಂತನ ಮಗಳೂ ಆಗಿದ್ದಳು.

ವಿಲಾಸಿನಿಯ ಮದುವೆಯ ಸಮಯದಲ್ಲಿಯೇ ಸರಸ್ವತೀಪ್ರಸನ್ನನು, ವಿನೋದಿನಿಗೂ ವಿವಾಹಮಾಡಲೋಸುಗ, ಮಾತಾಪಿತೃಹೀನನಾಗಿಯೂ, ನಿರಾಶ್ರಯನಾಗಿಯೂ, ದರಿದ್ರನಾಗಿಯೂ ಇದ್ದ ಶರಚ್ಚಂದ್ರನೆಂಬ ಹುಡುಗನೊಬ್ಬನನ್ನು ಮನೆಯಲ್ಲಿಯೇ ಇಟ್ಟುಕೊಂಡು ಕಾಪಿಡುತಿದ್ದನು. ಆಗ ವಿನೋದಿನಿಗೆ ಐದು ವರ್ಷ ವಯಸ್ಸು, ಶರಚ್ಚಂದ್ರನಿಗೆ ಹನ್ನೆರಡನೆಯ ವರ್ಷವು ನಡೆಯುತ್ತಿದ್ದಿತು. (ವಿಲಾಸಿನಿಯ ಮದುವೆಯೊಡನೆ ವಿನೋದಿನಿಯ ಮದುವೆಯೂ ನಡೆದುಹೋಗಲು ಕಾರಣಾಂತರದಿಂದ ಪ್ರತಿಬಂಧಕವುಂಟಾಯಿತು.) ಬಾಲಕರಿಬ್ಬರೂ ಏಕತ್ರವೇ ಇದ್ದುಕೊಂಡು ಆಟಪಾಟಗಳಲ್ಲಿಯೂ, ಮಾತುಕತೆ

ಗಳಲ್ಲಿಯೂ, ಊಟೋಪಚಾರಗಳಲ್ಲಿಯೂ ಪರಸ್ಪರ ಸೇರಿಕೊಂಡೇ ಕಾಲವನ್ನು ಕಳೆಯುತ್ತಿದ್ದರು. ಇವರೀವ ಬಾಲಕಬಾಲಿಕೆಯರ ಪ್ರೀತಿಯು ಚೆನ್ನಾಗಿ ರೂಢಮೂಲವಾಗಿ ದಿನೇದಿನೇ ವೃದ್ಧಿಯಾಗುತ್ತಲಿದ್ದಿತು. ವಿನೋದಿನಿಗೆ ಎಂಟುವರ್ಷ ವಯಸ್ಸಾದ ಕೂಡಲೆ ಶರಚ್ಚಂದ್ರನಿಗೆಕೊಟ್ಟು ವಿವಾಹವಾಯಿತು. ಶರಚ್ಚಂದ್ರನ ನಡೆನುಡಿಗಳು ಬಲು ರಮ್ಯವಾಗಿದ್ದುದರಿಂದ, ಅತ್ತೆ ಮಾವಂದಿರು ಮಗನಿಗಿಂತಲೂ ಅಧಿಕವಾಗಿ ಪ್ರೀತಿಸುತ್ತಿದ್ದರು. ಶರಚ್ಚಂದ್ರನು ಎಲ್ಲರಿಗೂ ಆದರಣೀಯನಾಗಿಯೂ, ವಿಲಾಸಿನಿಗೆ ಪರಮ ಮಿತ್ರನಾಗಿಯೂ, ವಿನೋದಿನಿಗೆ ಹೃದಯೇಶ್ವರನಾಗಿಯೂ, ಆನಂದಸ್ವರೂಪನಾಗಿಯೂ ಇದ್ದುಕೊಂಡು ಕಾಲವನ್ನು ಕಳೆಯಲಾರಂಭಿಸಿದನು. ಶರಚ್ಚಂದ್ರನು ಯಥೇಷ್ಟವಾಗಿ ವಿದ್ಯೆಯನ್ನು ಸಂಪಾದಿಸಿದ್ದರೂ ತೃಪ್ತಿಯಿಲ್ಲದೆ, ಯಾವಾಗಲೂ ಪರೋಪಕಾರವನ್ನು ಮಾಡಬೇಕೆಂಬ ಉದ್ದೇಶದಿಂದ ವೈದ್ಯಶಾಸ್ತ್ರವನ್ನು ಅಭ್ಯಾಸ ಮಾಡಲೋಸುಗ ವಿದ್ಯಾನಗರದಲ್ಲಿದ್ದ ವೈದ್ಯವಿದ್ಯಾಲಯದಲ್ಲಿ ವಿದ್ಯಾರ್ಥಿಯಾಗಿ ಸೇರಿದನು. ಶರಚ್ಚಂದ್ರನು ವಿದ್ಯಾನಗರಕ್ಕೆ ಬರುವುದಕ್ಕೆ ಸ್ವಲ್ಪ ದಿನಗಳ ಮುಂಚಿತವಾಗಿಯೇ ಸರಸ್ವತೀಪ್ರಸನ್ನನು ಸ್ವರ್ಗವಾಸಿಯಾದನು. ಅದೇ ಗ್ರಾಮದಲ್ಲಿ ವಾಸವಾಗಿರುತ್ತಿದ್ದ, ಸರಸ್ವತೀಪ್ರಸನ್ನನಿಗೆ ಆಪ್ತನಾದ ಇಂದಿರೇಶನೆಂಬ ಸಚ್ಚರಿತ್ರನಾದ ದೊಡ್ಡಮನುಷ್ಯನೊಬ್ಬನು ಸರಸ್ವತೀಪ್ರಸನ್ನನ ಸಂಪತ್ತಿನ ಆಯವ್ಯಯವನ್ನು ನೋಡಿಕೊಳ್ಳಲು ನಿಯಮಿಸಲ್ಪಟ್ಟನು. ಈ ದೊಡ್ಡಮನುಷ್ಯನು ಸರಸ್ವತೀಪ್ರಸನ್ನನ ಸಂಪತ್ತಿನಿಂದಲೇ ಪರಿವರ್ಧಿತನಾದುದರಿಂದ, ಆತನ ದಂಪತಿ ಮಕ್ಕಳಲ್ಲಿ ಬಹಳ ಬಾಧ್ಯಪಟ್ಟಿದ್ದನು. ಹೆಣ್ಣು ಹುಡುಗಿಯರಿಬ್ಬರೂ ಆತನಲ್ಲಿ ಅಧಿಕವಾದ ಪ್ರೀತಿಯನ್ನಿಟ್ಟಿದ್ದರು. ಆತನು ಸಮಯಬಿದ್ದಾಗ ಹುಡುಗಿಯರಿಗೆ ಪಾಠವನ್ನು ಹೇಳಿಕೊಡುತ್ತಲಿದ್ದನು. ಈತನಲ್ಲೇ

ಹೊತುಗಿದುದು ಉಪಾಧ್ಯಾಯನೆಂದು ಕರೆಯುವ ವಾಡಿಕೆಯಿದ್ದಿತು. ಈ ಮೇಲ್ಕಂಡ ಜನಗಳೇ ನಮ್ಮ ಸಣ್ಣ ನವನ್ಯಾಸದಲ್ಲಿ ಪ್ರಧಾನ ಪಾತ್ರರು, ಇವರು ಹೊರತಾಗಿ ಈ ಗ್ರಂಥದಲ್ಲಿ ಬಂದಿರುವ ಪಾತ್ರಗಳು ಉಪಸ್ಥಿತರಾಗಬಹುದು. ಅಂತಹವರ ಪರಿಚಯವನ್ನು ನಮ್ಮ ವಾಚಕರಿಗೆ ಅಲ್ಲಲ್ಲಿಯೇ ಮಾಡಿಸಿ ಕೊಡುವೆವು.



## ಮೂರನೆಯ ಸಂಧಿ.

### ಬೀ ಜಾ ವಾ ಪ.

ಯಾವ ಸಮುದ್ರದಲ್ಲಿ ಮುಳುಗಿರುವೆನೋ, ಆ ಸಮುದ್ರದ ತಳದಲ್ಲಿ ಯಾವ ರತ್ನವಿರುವುದೆಂಬುದನ್ನು ತಿಳಿಯಬೇಕಾದುದು ಮುಖ್ಯವಾದ ಕೆಲಸವಲ್ಲವೆ? ಯಾವ ಲೋಭವನ್ನು ಇಲ್ಲಿಯವರೆಗೂ ನನ್ನ ಹೃದಯದಲ್ಲಿ ಪೋಷಣಮಾಡಿದೆನೋ, ಅದನ್ನು ಕೊನೆಗಾಣಿಸುವುದು ಧರ್ಮವಲ್ಲವೇ? ಯಾವ ಆಶೆಯೆಂಬ ಲತೆಯನ್ನು ಹೃದಯಾಲವಾಲದಲ್ಲಿ ಅತಿ ಪ್ರಯಾಸದಿಂದ ಸಾಕಿ ಸಲಹಿದೆನೋ, ಅದರ ಫಲವನ್ನು ಅನುಭವಿಸದೇ ಆ ಲತೆಯನ್ನು ನಿರ್ಮೂಲಮಾಡುವುದು ಯಾರಿಗೆ ತಾನೇ ಯೋಗ್ಯವಾದುದು? ಈ ದುರ್ದಮನೀಯವಾದ ಆಶೆಯನ್ನು ಬಿಡಲು ನನ್ನಿಂದ ಸಾಧ್ಯವಲ್ಲ. ಲೋಕದ ಜನರು ನನ್ನನ್ನು ನಿಂದಿಸಬಹುದು - ನಿಂದಿಸಲಿ. ನನ್ನನ್ನು ಕಂಡಕಂಡವರೆಲ್ಲರೂ ದ್ವೇಷಿಸುವರು - ದ್ವೇಷಿಸಲಿ. ಜೀವಿತಾನಂತರದಲ್ಲಿ ನನಗೆ ನರಕವಾಸವುಂಟಾಗಬಹುದು - ಉಂಟಾಗಲಿ. ನಾನು ಯಾವುದಕ್ಕೂ ಹೆದರುವ ಹಾಗಿಲ್ಲ. ಇಹ ಜನ್ಮದಲ್ಲಿಯೇ ನನ್ನ ಇಷ್ಟವನ್ನು ನೆರವೇರಿಸಿಕೊಳ್ಳದೇ ಬಿಡತಕ್ಕವಳಲ್ಲ. ವಿನೋದಿನಿಯನ್ನು ದುಃಖಸಾಗರದಲ್ಲಿ ಮುಳುಗಿಸಿದಲ್ಲದೇ, ನನ್ನ ಅಭಿಪ್ರಾಯವು ನೆರವೇರುವ

ಸಂಭವವಿಲ್ಲ. ನಾನೇನು ಮಾಡಲಿ. ವಿನೋದಳು ನನ್ನ ಸುಖಕ್ಕೆ ಕಂಟಕಸ್ವರೂಪಳು. ವಿನೋದಳಿಂದ ನನ್ನ ಕೆಲಸವೆಲ್ಲವೂ ಹಾಳು. ನನ್ನ ತಂಗಿಯಾದರೇನು ? ವಿನೋದಳು ನನಗೆ ಪರಮಶತ್ರು. ಶತ್ರುವನ್ನು ನಿರ್ಮೂಲ ಮಾಡದಿದ್ದಲ್ಲಿ, ನಾನು ಕೃತಕಾರ್ಯಳಾಗುವುದೆಂದರೇನು ?

ಪ್ರಾತಃಕಾಲ ಸುಮಾರು ಒಂಭತ್ತು ಗಂಟೆಯ ಸಮಯದಲ್ಲಿ ವಿಲಾಸಿನಿಯೊಬ್ಬಳೇ ತನ್ನ ಕೋಣೆಯಲ್ಲಿ ಕುಳಿತುಕೊಂಡು ಮೇಲೆ ಹೇಳಿದಂತೆ ಯೋಚನೆಮಾಡುತಲಿದ್ದಳು. ಅಷ್ಟು ಹೊತ್ತಿಗೆ ಸರಿಯಾಗಿ ದಾಸಿಯಾದ ಹರಮಣಿಯು ನಗುತ ನಗುತ ಮೈಯನ್ನು ಕುಲುಕಿಸಿಕೊಂಡು ಆ ಕೋಣೆಯೊಳಗೆ ಪ್ರವೇಶಮಾಡಿದಳು. ಹರಮಣಿಗೆ ಯೌವನವು ಕಳೆಯುತಬಂದಿದ್ದಿತು. ಆದರೆ ಇನ್ನೂ ಮುದಿತನವು ಬರಲಿಲ್ಲವಾಗಿ, ಅವಳ ಮನದ ಆವೇಗವು ಈಷದಪಿ ಕಡಮೆಯಾಗಿರಲಿಲ್ಲ. ಹರಮಣಿಯ ವಯಸ್ಸು ಎಷ್ಟಾದರೂ ಆಗಲಿ, ನೋಡಿದವರೆಲ್ಲರಿಗೂ ಅವಳು ಯುವತಿಯಾಗಿಯೇ ಕಾಣಿಸಿಕೊಳ್ಳುತಿದ್ದಳು. ಹರಮಣಿಯ ಆಗುಲ್ಫಲಂಬಿಯಾದ ಕೃಷ್ಣಕೇಶರಾಶಿಯನ್ನೂ, ದುಂಡುದುಂಡಾಗಿರುವ ಅಂಗಾಗಗಳನ್ನೂ, ವರ್ಣಿಸಲಸಾಧ್ಯವಾದ ಮಂದಗಮನವನ್ನೂ ನೋಡಿದರೆ, ಆಕೆಗೆ ಯೌವನವು ಗಳಿತವಾಯಿತೆಂದು ಹೇಳುವುದು ಯಾರಿಗೆತಾನೇ ಸಾಧ್ಯ ? ಹರಮಣಿಯು ಯೋಗ್ಯತೆಗೆ ಮೀರಿ ಆಭರಣವನ್ನು ಧರಿಸಿದ್ದಳು. ಅವಳು ಯಾವಾಗಲೂ ತಲೆಯನ್ನು ಬಾಚಿ ಜಡೆಯನ್ನು ಹಾಕಿಕೊಂಡು ಹೂ ಮುಡಿದುಕೊಳ್ಳದೆ ಹೊರಗೆ ಹೊರಟವಳೇ ಅಲ್ಲ. ತಾಂಬೂಲವನ್ನು ಎಲ್ಲಿಯಾದರೂ ಸಂಪಾದಿಸಿ ಪದೇ ಪದೇ ಹಾಕಿಕೊಳ್ಳುತ್ತಾ ತುಟಿಯನ್ನು ಕೆಂಪುಮಾಡಿಕೊಂಡಿರುವಳು. ಮಾತನಾಡುವಾಗ ಒಂದುಬಗೆಯಾಗಿ ನಗುವಳು. ಆ ನಗುವು ಎಂತಹದೆಂಬುದನ್ನು ಮಾತ್ರ ನಾವು ಕಾಣೆವು.

ಯಾರೋ ಅವಳಿಗೆ ಉಡುವುದಕ್ಕೆ ಒಂದು ಒಳ್ಳೆಯ ಸೀರೆಯನ್ನು ಕೊಟ್ಟಿದ್ದರು. ಅವಳು ಅದನ್ನು ಯಾವಾಗಲೂ ಉಟ್ಟುಕೊಂಡು ಸೆರಗೆಯನ್ನು ಚಿಮ್ಮುತ್ತಾ ಮೆಲ್ಲಮೆಲ್ಲನೆ ಕೆಲಸಕ್ಕೆ ಹೋಗುತ್ತಿದ್ದಳು. ಪಾಠಕರೆ ! ಇಂತಹ ನಮ್ಮ ಹರಮಣಿಯನ್ನು ನೀವು [illegible]ಮುಸ್ಸಾಸವಳೆಂದಾಗಲಿ, ಗಳಿತಯೌವನಳೆಂದಾಗಲಿ ಹೇಳುವುದಾದರೆ ನಾವು ನಿಮ್ಮೊಡನೆ ವಿಶೇಷವಾಗಿ ದಾರುಣವಾದ ವಿವಾದವನ್ನು ಬೆಳೆಸುವೆವು. ಅದರಿಂದ ನಿಮಗೆ ಪರಾಜಯವೇ ಹೊರತು, ಜಯವೆಂಬುದುಂಟಾಗಲಾರದು. ಇದು ಖಂಡಿತ. ಮಾಡುವುದಕ್ಕೆ ಕೆಲಸವಿಲ್ಲದ ನೆರೆಹೊರೆ ಹೆಂಗಸರು ಹರಮಣಿಯ ನಡತೆಯನ್ನು ಕುರಿತು ನಾನಾಮಾತುಗಳನ್ನಾಡುವರು. ಆದರೆ ನಮ್ಮ ಹರಮಣಿಯು ಇಂತಹ ಲೋಕವಾದವನ್ನು ಗಣನೆಗೆ ತಂದು ಕೊರಗುವಷ್ಟು ಭೀರುವಾದ ಹೆಂಗಸಾಗಿರಲಿಲ್ಲ. ಇಲ್ಲದ ಕಡೆ ಕಲಹವನ್ನುಂಟುಮಾಡುವುದರಲ್ಲಾಗಲಿ, ಕಲಹವಿದ್ದಲ್ಲಿ, ಅದನ್ನು ಹೋಗಲಾಡಿಸಿ ಸ್ನೇಹವನ್ನುಂಟುಮಾಡುವುದರಲ್ಲಾಗಲಿ, ಹರಮಣಿಯಷ್ಟು ನಿಪುಣೆಯು ಆ ಗ್ರಾಮದಲ್ಲಿ ಮತ್ತಾರೂ ಇರಲಿಲ್ಲ. ಇದಕ್ಕಾಗಿಯೇ ಇವಳನ್ನು ಕೆಲವರು ಪ್ರೀತಿಸುತ್ತಿದ್ದರು ; ಮತ್ತೆ ಕೆಲವರು ಹತ್ತಿರದಲ್ಲಿಯೇ ಸೇರಿಸುತ್ತಿರಲಿಲ್ಲ.

ಹರಮಣಿಯನ್ನು ಪ್ರೀತಿಸುತ್ತಿದ್ದವರಲ್ಲಿ ಸರಸ್ವತೀಪ್ರಸನ್ನನ ಮನೆಯವರೊಬ್ಬರು. ಈಕೆಯು ಇವರ ಮನೆಯಲ್ಲಿ ಕೆಲಸಕ್ಕೆ ಇದ್ದಳು. ಇವಳ ತೀಕ್ಷ್ಣವಾದ ಬುದ್ಧಿಯನ್ನು ನೋಡಿ ಮನೆಯವರೆಲ್ಲರೂ, ಅದರಲ್ಲಿಯೂ ವಿನೋದಿನಿಯು, ಎಷ್ಟರಮಟ್ಟಿಗೆ ಪ್ರೀತಿಸುತ್ತಿದ್ದರೆಂಬುವನ್ನು ನಾವಿಲ್ಲಿ ವಿವರಿಸಲು ಸಾಧ್ಯವಲ್ಲ. ಹರಮಣಿಯು ನಿತ್ಯವೂ ಶರಚ್ಚಂದ್ರನಿಂದ ಬರುತ್ತಿದ್ದ ಕಾಗದವನ್ನು ತಡಮಾಡದೇ ತಾನು ಕೊಡುತ್ತಲೂ, ವಿನೋದಿನಿಯ ಕಾಗದಗಳನ್ನು ಕೂಡಲೆ ಅಂಚೆಯ ಇಲಾಖೆಗೆ ತಲ್ಪಿಸುತ್ತಲೂ, ಇಷ್ಟೇ ಅಲ್ಲದೆ. ಆಕೆಯು

ಹೇಳಿದ ಯಾವ ಕೆಲಸವನ್ನಾದರೂ ಬುದ್ಧಿವಂತಿಕೆಯಿಂದ ನೆರವೇರಿ ಸುತ್ತಲೂ, ವಿನೋದಿನಿಯು ಅಂತರಂಗಕ್ಕೆ ಸೇರಿ ಮನೆಯವಳಂತೆಯೇ ಇರುತ್ತಿದ್ದಳು. ವಿಲಾಸಿನಿಯು ಮೊದಲು ಮೊದಲು ಹರಮಣಿಯನ್ನು ಅಷ್ಟಾಗಿ ಪ್ರೀತಿಸುತ್ತಿರಲಿಲ್ಲವಾದರೂ, ಕೆಲವು ದಿನಗಳಿಂದೀಚೆಗೆ ಆಕೆಯನ್ನು ತನ್ನ ಅಂತರಂಗಕ್ಕೆ ಸೇರಿಸಿಕೊಂಡು ವಿಶೇಷವಾಗಿ ಸನ್ಮಾನವನ್ನು ತೋರಿಸಲಾರಂಭಿಸಿದಳು. ಇದರ ಕಾರಣವಾವುದೂ ನಮಗೆ ಗೊತ್ತಿಲ್ಲ.

ಒಂದಾನೊಂದು ದಿನ ಹರಮಣಿಯು ನಗರದಿಂದ ಬಂದು ದನ್ನು ವಿಲಾಸಿನಿಯು ನೋಡಿ—ಇದೇನು, ಇಷ್ಟು ವೈಭವ, ಎಂದು ಕೇಳಿದಳು.

ಹರಮಣಿ—ಕಾಗದ ಬಂದಿರುವುದು.

ವಿಲಾಸಿನಿ—ವಿನೋದಿನಿಗೋ?

ಹರ—ಹರಮಣಿ ಕೊಟ್ಟರೆ—

ವಿಲಾ—ಎಲ್ಲಿ?

ಹರಮಣಿಯು ಮುಚ್ಚಿಟ್ಟಿದ್ದ ಕಾಗದವನ್ನು ಹೊರಗೆ ತೆಗೆದು ಕೊಟ್ಟಳು. ಕಾಗದವು ವಿನೋದಿನಿಯ ಹೆಸರಿನಲ್ಲಿದ್ದರೂ, ವಿಲಾಸಿನಿಯು ಅದನ್ನು ಬಿಚ್ಚಿ ಓದಿದಳು.

“ಪ್ರಿಯತಮೆ! ನಿನಗೆ ನಾನು ಹತ್ತಾರು ಕಾಗದಗಳನ್ನು ಬರೆದರೂ, ಯಾವುದಕ್ಕೂ ನಿನ್ನಿಂದ ಉತ್ತರ ಬಾರದಿರಲು ಕಾರಣವೇನು? ನಿನ್ನ ಯೋಚನೆಯಿಂದ ನನ್ನ ಓದುಗಾರಿಕೆಯು ಸಾಗದೇ ಹೋಗಿರುವುದು. ಈ ಕಾಗದಕ್ಕೂ ನಿನ್ನಿಂದ ಉತ್ತರವು ಎರಡುದಿನಗಳೊಳಗಾಗಿ ಬಾರದೇ ಹೋದಲ್ಲಿ ನಾನೇ ಅಲ್ಲಿಗೆ ಬಂದು ಬಿಡಬೇಕಾಗುವುದು. ನಿನ್ನ ಉದಾಸೀನತೆಯಿಂದ ನಾನು ಕೊರಗಿ ಕೊರಗಿ ಸಾಯು

ಪಂತಾಗಿರುವೆನು. ನನ್ನ ಯೋಗಕ್ಷೇಮವು ನಿನಗೆ ಸೇರಿದುದಾಗಿದ್ದರೆ ಕೂಡಲೆ ಉತ್ತರವನ್ನು ಕೊಡು. ಇತಿ ಶರಚ್ಚಂದ್ರ.

ಹರಮಣಿಯು ಇದನ್ನು ಕೇಳಿ—ಒಳ್ಳೆಯದೇ ಆಯಿತು. ನನಗೆ ಬೇಕಾಗಿದ್ದುದೂ ಇದೇ, ಎಂದಳು.

ವಿಲಾ—ಆತನು ಬಂದರೆ ನೀನೇನು ಮಾಡುವೆ ?

ಹರ—ಇಬ್ಬರಿಗೂ ಮುಖಸಂದರ್ಶನವಾಗದಂತೆ ಮಾಡುವೆನು.

ವಿಲಾ—(ಯೋಚಿಸಿ) ಅದರಿಂದ ನನಗೆ ಬಂದ ಭಾಗ್ಯವೇನು ?

ಹರ—ದಂಪತಿಗಳಲ್ಲಿ ಪರಸ್ಪರ ಪ್ರೀತಿಯು ಅಭೇದ್ಯವಾಗಿರುವ ವರೆಗೂ ನಮ್ಮ ಉದ್ದೇಶವು ನೆರವೇರದು. ಪ್ರೀತಿಯು ವಿಘಟಿತ ವಾದರೆ, ಇಬ್ಬರೂ ನಾವು ಎಳೆದಂತೆ ಬರುವರು. ಅದಕ್ಕಾಗಿ ನಾವು ವಿಶೇಷವಾಗಿ ಯೋಚಿಸಬೇಕಾದ್ದಿಲ್ಲ. ಪ್ರಥಮತಃ ಭೇದೋಪಾಯವು ಶ್ರಮಸಾಧ್ಯವಾದುದು. ಮೊದಲು ಇದನ್ನು ಸಾಧಿಸಿಕೊಂಡಲ್ಲದೇ ಉಳಿದ ಕೆಲಸಗಳು ನೆರವೇರಲಾರವು.

ವಿಲಾ—ಹರ, ನನ್ನ ರಾಜಕಾರ್ಯಕ್ಕೆ ನೀನೇ ಮಂತ್ರಿ ; ನಿನ್ನ ಮಂತ್ರವು ಇತರರಿಗೆ ಗೋಚರವಾಗದಂತಿರಲಿ.

ಹರ—ಅದು ನನ್ನ ಕೆಲಸ.

ಇಷ್ಟನ್ನುವುದರೊಳಗಾಗಿ ವಿನೋದಿನಿಯು ವಿಲಾಸಿನಿಯು ಬಳಿಗೆ ಬಂದಳು. ಅವಳ ಮುಖದಲ್ಲಿ ವಿಷಾದರೇಖೆಯು ಕಾಣಬರು ತಿದ್ದಿತು. ಇದನ್ನು ಕಂಡು ವಿಲಾಸಿನಿಯು—ವಿನೋದ, ಇದೇನು ? ನೀನು ಬಹಳ ಬೇಸತ್ತವಳಂತೆ ಕಾಣಿಸುವೆ ? ಎಂದಳು.

ವಿನೋದಿನಿ—(ಉತ್ತರವಿಲ್ಲ).

ವಿಲಾಸಿನಿ—ನಿನ್ನ ಗಂಡನಿಂದೇನಾದರೂ ಕಾಗದ ಬಂದಿತೇ ?

ವಿನೋದಿನಿ—(ಕಂಬನಿಗರೆಯುತ್ತ) ಇಲ್ಲ.

ವಿಲಾ—ಹಾಗು, ಇದಕ್ಕಾಗಿ ಅಳುವುದುಂಟೆ? ಆತನು ಕಾರ್ಯ ಗೌರವದಿಂದ ಕಾಗದ ಬರೆಯದೇ ಇರಬಹುದು. ಇದಕ್ಕಾಗಿ ಎಂದೂ ಗಂಡನನ್ನು ಕಾಣದವಳಂತೆ ತತ್ತರಗುಟ್ಟುವೆ? ಬಹಳ ಚೆನ್ನಾಗಿದೆ!

ವಿನೋದಿನಿ—ಅಕ್ಕ! ನಿತ್ಯವೂ ತಪ್ಪದೇ ಕಾಗದ ಬರುತ್ತಿದ್ದು, ಹತ್ತಾರು ದಿನಗಳಿಂದ ಯಾವ ಕಾಗದವೂ ಬರದೇ ಇದ್ದರೆ, ಯಾರಿಗೆ ತಾನೇ ಸಂಶಯ ಉಂಟಾಗುವುದಿಲ್ಲ.

ವಿಲಾ—ಪರೀಕ್ಷೆಯ ಕಾಲವಾದುದರಿಂದ ಬರೆಯದೇ ಇರಬಹುದು.

ವಿನೋದಿನಿ—ಈ ಕಾರಣಕ್ಕಾಗಿ ಅವರು ಬರೆಯದೇ ಸುಮ್ಮನಿರತಕ್ಕವರಲ್ಲ, ಅದನ್ನು ನಾನು ಬಲ್ಲೆನು.

ಹರ—ತಾಯಿ! ನಿನಗಿನ್ನೂ ಮನುಷ್ಯರ ಸ್ವಭಾವವು ಗೊತ್ತಾಗಿಲ್ಲ. ಈ ರೀತಿಯಲ್ಲಿ ಗಂಡನನ್ನೇ ನಂಬಿಕೊಂಡು ಕೊರಗುವ ನಿನ್ನಂತಹ ಹೆಂಗಸರ ಪಾಡೆಲ್ಲಾ ಹೀಗೆಯೇ ಸರಿ

ವಿನೋದಿನಿ—(ವಿಸ್ಮಿತಳಾಗಿ) ಹಾಗೆಂದರೇನು?

ಹರ—ನೀನು ವಿದ್ಯಾನಗರವನ್ನು ನೋಡಿದವಳೇ ಅಲ್ಲ. ಅಲ್ಲಿ ನಿನಗಿಂತಲೂ ಶತಾಧಿಕವಾಗಿ ರೂಪವತಿಯರಿರುವರು. ಯೌವನಸ್ಥನಾದ ಯಾವಗಂಡಸೇ ಆಗಲಿ ಅಲ್ಲಿಗೆ ಹೋದರೆ, ಆತನ ಮನಸ್ಸು ಬದಲಾಯಿಸದೇ ಇರದು. ಅವರಲ್ಲಿಯೂ, ಎಲ್ಲರ ಮನೆಗೂ ಧಾರಾಳವಾಗಿ ಹೋಗಿ ಬರುವ ವೈದ್ಯರಿಗಂತೂ, ಹೇಳಬೇಕೆಲಸವಿಲ್ಲ. ನೀನು ಮಾತ್ರ-ನನ್ನಗಂಡ, ನನ್ನಗಂಡ, ಎಂದು [illegible] ವಿನೋದಿಸಿಯುತು ನಿನ್ನಗಂಡನಿಗೆ ಮನಸ್ಸು [illegible]! ಈ ಮಹೋತ್ಸವದಲ್ಲಿ ನಿನ್ನ ಜ್ಞಾಪಕ ಆತನಿಗೆ ಹೇಗಾಗಬೇಕು?

ವಿನೋದಿನಿ—ಸುಟ್ಟಮೋರೆಮುದುಕಿ! ಅವರ ಸ್ವಭಾವ ನಿನಗೇನು ಗೊತ್ತು? ಅವರೆಂದಿಗೂ ದುಷ್ಕೃತ್ಯದಲ್ಲಿ ಪ್ರವರ್ತಿಸತಕ್ಕವರಲ್ಲ.

ಹರ—ವಿನೋದ! ನಿನ್ನ ಗಂಡನ ವಿಷಯದಲ್ಲಿ ನಿನಗೆ ನಂಬುಗೆ ಇರಬಹುದು. ಸಂಸಾರದ ರುಚಿಯನ್ನು ಅನುಭವಿಸಿದ ಯೌವನಸ್ಥನು ಸರ್ವಸುಖೈಕಹೇತುವಾದ ವಿದ್ಯಾನಗರದಲ್ಲಿ ಜಿತೇಂದ್ರಿಯನಾಗಿರುವುದಾದರೆ, ಆತನು ಜ್ಞಾನವಿಲ್ಲದ ಪಶುವಾಗಿರಬೇಕು. ಎಂಥೆಂಥವರೋ ಏನೇನೋ ಆಗಿ ಹೋಗಿರುವರು. ಪರೋಪಕಾರವೆಂಬ ನೆಪವನ್ನು ಮಾಡಿಕೊಂಡು ಏಕಾಂಗಿಯಾಗಿ ಪರಸ್ಥಳಕ್ಕೆ ಹೋಗಿರುವ ನಿನ್ನ ಗಂಡನು ಮಾತ್ರ ಯೋಗೀಶ್ವರನೇನೋ? ಇರಬಹುದು! ಇರಬಹುದು!!

ವಿಲಾಸಿನಿ—(ಕಪಟಕೋಪವನ್ನು ತಾಳಿ) ಪರ! ನೀನೇನು ಮಾತನಾಡುವೆ? ನಿನಗೆ ಕೊಂಚವೂ ಬುದ್ಧಿಯಿಲ್ಲವೆಂದು ತೋರುವುದು.

ಪರ—ನಾನು ಹೇಳುವುದರಲ್ಲಿ ಸುಳ್ಳೇನಿರುವುದು?

ವಿಲಾ—ಸುಳ್ಳಾಗಲಿ, ನಿಜವಾಗಲಿ, ಅದರಿಂದ ನಮಗೇನು? ಗಂಡಸಿಗೆ ಯಾವ ವಿಷಯದಲ್ಲಿಯೂ ಭಯವಿರುವುದಿಲ್ಲ. ಗಂಡಸು ಯಾವ ಕೆಲಸವನ್ನಾದರೂ ಮಾಡಿ ದಕ್ಕಿಸಿಕೊಳ್ಳ ಬಲ್ಲನು. ಶಾಸ್ತ್ರದಲ್ಲಿಯೂ ಹಾಗೆಯೇ ಹೇಳಿರುವುದಂತೆ ಪಾಳು ಹೆಂಗಸು ಮಾತ್ರ ಕೆಟ್ಟ ಕೆಲಸಮಾಡಿದರೆ, ನಾಯಿ ಮುಟ್ಟಿದ ಗಡಿಗೆಯಂತೆ ತ್ಯಾಜ್ಯಳಂತೆ. ಇದರಲ್ಲಿ ನಮ್ಮ ಯತ್ನವೇನಿರುವುದು?

ವಿನೋದಿನಿ—ಗಂಡಸಿನ ಸ್ವಭಾವವನ್ನು ಕುರಿತು ನಾವು ಮಾತನಾಡಿ ಪ್ರಯೋಜನವೇನು? ಈಸಲ ಅವರು ನನ್ನನ್ನು ಜತೆಯಲ್ಲಿ ಕರೆದುಕೊಂಡು ಹೋಗದಿರುವುದರಿಂದಲೇ, ಇಷ್ಟೆಲ್ಲಾ ಸಂದೇಹಕ್ಕೆ ಆಸ್ಪದವಾಗಿರುವುದು.

ವಿಲಾಸಿನಿ—ಪರಮಣಿ! ನೋಡಿದೆಯಾ? ಶರಚ್ಚಂದ್ರನು ಈಸಲ ವಿನೋದಿನಿಯನ್ನು ಏತಕ್ಕೆ ಕರೆದುಕೊಂಡು ಹೋಗಬಾರ

ದಾಗಿದ್ದಿತು? ಇದರಿಂದ ಸಂಶಯವುಂಟಾಗುತ್ತದೆ ಸಹಜವಾಗಿರುವುದು.

ಹರಮಣಿ—ನಿಜ ನಿಜ.

ನಿಜವಾಗಲಿ, ಸುಳ್ಳಾಗಲಿ, ಸಂಭವವಿರಲಿ, ಅಸಂಭವವಿರಲಿ, ವಿನೋದಿನಿಯ ಹೃದಯದಲ್ಲಿ ದುರಂತವಾದ ಚಿಂತೆಯು ಬೇರೂರಿತು. ಆಕೆಯು ತನ್ನ ಹೃದಯದ ಆವೇಗವನ್ನು ತಡೆಯಲಾರದೇ ಬೇರೆಯ ಕಡೆಗೆ ಹೊರಟುಹೋದಳು. ಬಳಿಕ ಹರಮಣಿಯು ನಮನಕ್ಕ - ರೋಗಿಗೆ ಔಷಧವನ್ನು ಹೀಗೆಯೇ ಕೊಡಬೇಕು, ಎಂದಳು.

ವಿಲಾ—ನಿನಾದರೂ ಆಗಲಿ, ವಿನೋದಳ ವ್ಯಸನವನ್ನು ನೋಡಿ ನನ್ನ ಮನಸ್ಸು ಕಳವಳಗೊಳ್ಳುವುದು.

ಹರ—ಕಾರಣ ?

ವಿಲಾ—ಕಾರಣವೆ ? ನಾನು ಬಹಳವಾಗಿ ಯೋಚಿಸಿ ನೋಡಿ ರುವೆನು. ಇದರಿಂದ ನಮ್ಮ ಕೆಲಸವು ಸುಖಪರಿಣಾಮವುಳ್ಳದ್ದಾ ಗುವುದಿಲ್ಲ. ಆದರೂ ನಾನು ನನ್ನ ಸಂಕಲ್ಪವನ್ನು ಹಿಂತಿರುಗಿಸ ಲಾರೆನು. ವಿನೋದಿನಿಯು ಹಣೆಯಲ್ಲಿ ಬರೆದಿರುವಂತೆ ನಡೆದು ಹೋಗಲಿ. ನಾನು ಮಾತ್ರ ಕೈಗೊಂಡ ಕೆಲಸವನ್ನು ತ್ಯಾಗಮಾಡ ಲಾರೆನು. ಈ ನನ್ನ ಪ್ರಯತ್ನದಿಂದ ನನ್ನ ಮನೋವ್ಯಥೆಯು ಕೊಂಚ ಮಟ್ಟಿಗೆ ಕಡಮೆಯಾಗುವ ಸಂಭವವುಂಟು.

ಈ ರೀತಿಯಾಗಿ ಸಂಭಾಷಣೆಯು ನಡೆಯುತ್ತಿರುವಲ್ಲಿ, ಹಠಾ ತ್ತಾಗಿ ಮನೆಯೊಳಗೆ ಚೀತ್ಕಾರಧ್ವನಿಯು ಕೇಳಿಬರಲು, ಇವರಿಬ್ಬರೂ ತ್ವರೆಯಿಂದ ಮನೆಯೊಳಗೆ ಹೊರಟು ಹೋದರು. ಅಲ್ಲಿ ವಿನೋ ದಿನಿಯು ಮೂರ್ಛೆಯನ್ನು ಹೊಂದಿ ನೆಲದ ಮೇಲೆ ಬಿದ್ದು ಒದ್ದಾಡು ತ್ತಿದ್ದಳು.

---

# ನಾಲ್ಕನೆಯ ಸಂಧಿ.

## ಸ್ತ್ರೀದೇವತೆ.

ವಿದ್ಯಾನಗರದಲ್ಲಿ ಸಂಧ್ಯಾಕಾಲವು ಅತಿ ಮನೋಹರವಾಗಿರುವುದು. ದೊಡ್ಡ ದೊಡ್ಡ ಪಟ್ಟಣಗಳಲ್ಲಿ ವಾಸವಾಗಿರುವ ಜನರು ಇದರ ಸೊಬಗನ್ನು ನೋಡಿ ಆನಂದಿಸುವರು. ಇತರರು ಈ ಶೋಭೆಯನ್ನು ಕಣ್ಣಾರೆ ನೋಡುವವರೆಗೂ, ಇದರ ಮಹಿಮೆಯು ಗೊತ್ತಾಗುವುದೇ ಇಲ್ಲ; ಒಂದುವೇಳೆ ನಾವು ಅದನ್ನು ಗ್ರಂಥದಲ್ಲಿ ಬರೆದು ತಿಳಿಸಿದರೂ ಅರ್ಥವೇ ಆಗುವುದಿಲ್ಲ, ಆದುದರಿಂದ ಸಂಧ್ಯಾಕಾಲದ ಮಹಿಮಾತಿಶಯವನ್ನು ನೋಡಬೇಕೆಂದು ಬಯಸುವವರು, ಒಂದು ಸಲವಾದರೂ ವಿದ್ಯಾನಗರಕ್ಕೆ ಹೋಗಿಬರುವುದಾದರೆ ಆಗ ನಮ್ಮ ಉದ್ದೇಶವು ಚರಿತಾರ್ಥವಾಗುವುದು.

ಇಂತಹ ಸಮಯದಲ್ಲಿ ಶರಚ್ಚಂದ್ರ ಅವನ ಮಿತ್ರ ಮಧುಸೂದನ ಇವರಿಬ್ಬರೂ ರಾಜಬೀದಿಯಲ್ಲಿ ನಡೆದು ಬರುತ್ತಿರುವಾಗ, ಶರಚ್ಚಂದ್ರನು ಮಧುಸೂದನನನ್ನು ಕುರಿತು - ಮಧು, ಹದಿನೈದು ದಿನಗಳಾದರೂ ವಿನೋದಿನಿಯಿಂದ ಒಂದು ಕಾಗದವೂ ಬರದಿರಲು ಕಾರಣವೇನಿರಬಹುದು ? ನಾನು ಬರೆದ ಕಾಗದಗಳಾವುವೂ ಆಕೆಗೆ ಸೇರಿರಲಿಕ್ಕಿಲ್ಲವೇ ? ಎಂದು ಹೇಳಿದನು.

ಮಧು—ಇದಕ್ಕಾಗಿ ಯೋಚನೆ ಯೇತಕೆ ?

ಶರತ್—ಆಕೆಯಿಂದ ನಿತ್ಯವೂ ಕಾಗದಬರುತ್ತಿದ್ದಿತು. ಈಗ ಮಾತ್ರ ಬರದಿರಲು ಕಾರಣವೇನು ? ಆಕೆಗೆ ಆವುದೋ ಘೋರತರವಾದ ವಿಪತ್ತು ಸಂಭವಿಸಿರಬೇಕೆಂದು ತೋರುವುದು.

ಮಧು--(ನಕ್ಕು)ನಿನ್ನಕಾಗದ ಆಕೆಗೆ ತಲಪದೇ ಇರಬಹುದು.

ಶರತ್—ಕಾಗದ ತಲಪುವುದಿಲ್ಲವೆಂದರೇನು ?

ಮಧು--ಹಾಗಾದರೆ, ತಲಪಿದ್ದರೂ ಆಕೆಯು ಉತ್ತರಕೊಡದೇ ಇರಬಹುದು.

ಶರತ್—ಮಧು, ನೀನು ಹುಚ್ಚನಂತೆ ಮಾತನಾಡಬೇಡ. ನನ್ನ ಹೆಂಡತಿ—ವಿನೋದಿನಿ—ನನ್ನ ಕಾಗದಕ್ಕೆ ಉತ್ತರ ಕೊಡುವು ದಿಲ್ಲವೆಂದರೇನು ? ಆಕೆಯು ಇತರರಂತೆ ಸಾಮಾನ್ಯ ಸ್ತ್ರೀಯಲ್ಲ.

ಮಧು—(ಹಾಸ್ಯೋನ್ಮುಖನಾಗಿ) ನೀನು ಹೆಣ್ಣಿಗ.

ಶರತ್— (ಗರ್ವದಿಂದ) ಮಧು ! ನೀನು ಯಾವಾಗಲೂ ಹೆಂಗಸನ್ನು ನೋಡಿದವನೇ ಅಲ್ಲನೆಂದು ತೋರುವುದು. ವಿನೋದಿನಿ ಯಂತಹ ಹೆಂಗಸಿಗೆ ಸ್ವಾಮಿಯಾಗುವ ಯೋಗವು ಎಲ್ಲರ ಹಣೆ ಯಲ್ಲಿಯೂ ಬರೆದಿಲ್ಲ. ಹೀಗಿರುವಲ್ಲಿ ಹುಡುಗನಾದ ನಿನಗೇನು ಗೊತ್ತು ?

ಮಧು—ಈ ವಿಷಯವು ನನಗೆ ಗೊತ್ತಾಗಬೇಕಾದ ಆವಶ್ಯಕ ವಿರುವುದಿಲ್ಲ. ನಾನು ನಿತ್ಯವೂ ದೇವರನ್ನು ಇದೇ ಪ್ರಾರ್ಥಿಸುವುದು. ನೀನಾದರೋ ಸ್ತ್ರೀ ದೇವತೆಯ ಉಪಾಸಕ ; ಆದುದರಿಂದ ನಿನ್ನ ಬಾಯಲ್ಲಿ ಈ ರೀತಿಯಾಗಿ ಹೊರಡುವುದು. ಸ್ತ್ರೀ ವಿಷಯದಲ್ಲಿ ವ್ಯಾಸಮುನಿಗಳು ಹೇಳಿರುವುದನ್ನು ಕೇಳು.

ಶ್ಲೋಕ ‖ ಸ್ತ್ರಿಯೋಹಿ ಮೂಲಂ ಕಲಹಸ್ಯ ಪುಂಸಾಂ ।
ಸ್ತ್ರಿಯೋಹಿ ಮೂಲಂ ನಿಧನಸ್ಯ ಪುಂಸಾಂ ‖
ಸ್ತ್ರಿಯೋಹಿ ಮೂಲಂ ನರಕಸ್ಯ ಪುಂಸಾಂ ।
ಸ್ತ್ರಿಯೋಹಿ ಮೂಲಂ ಸಕಲಸ್ಯ ಪುಂಸಾಂ ‖

ಪುರುಷರ ಕಲಹಕ್ಕೂ, ಮರಣಕ್ಕೂ, ನರಕಕ್ಕೂ, ಬಹು ಮಾತಿನಿಂದೇನು, ಸಕಲಕ್ಕೂ ಹೆಂಗಸರೇ ಕಾರಣರೆಂದು ಹೇಳಿರುವ ವ್ಯಾಸರ ವಾಕ್ಯವೇ ನನಗೆ ವೇದವಾಕ್ಯವು.

4

ಶರತ್—ವೃದ್ಧರಾದ ವ್ಯಾಸಮಹರ್ಷಿಗಳು ಹಾಗೆ ಅಭಿಪ್ರಾಯ ಪಟ್ಟಿರಬಹುದು. ಆದರೆ ಅದನ್ನೇ ಎಲ್ಲರೂ ನಂಬಿ ಸ್ತ್ರೀಯರಲ್ಲಿ ಯಾವಾಗಲೂ ಅವಿಶ್ವಾಸವನ್ನು ತೋರಿಸಿ, ಅವರನ್ನು ಸರ್ವಾತ್ಮನಾ ತ್ಯಾಗಮಾಡಬೇಕೆಂದು ನನ್ನ ಅಭಿಪ್ರಾಯವಲ್ಲ. ಸ್ತ್ರೀಯರು ಪುರುಷನ ಕೈಯಲ್ಲಿರುವ ದರ್ಪಣದಂತಿರುವರು. ದರ್ಪಣದಲ್ಲಿ ನಮ್ಮ ಸ್ವಭಾವವು ಯಥಾವತ್ತಾಗಿ ಪ್ರತಿಬಿಂಬಿತವಾಗುವುದು. ಆದುದರಿಂದ ನಮ್ಮ ಸ್ವಭಾವವನ್ನು ನಾವು ಸರಿಪಡಿಸುವುದು ಬಿಟ್ಟು ಹೆಂಗಸರನ್ನು ಬೈದರೆ ಪ್ರಯೋಜನವೇನು? ಪ್ರಕೃತ ವಿನೋದಿನಿಯ ಚಿಂತೆಯಿಂದ ನನಗೆ ನಿದ್ರಾಹಾರಗಳೇ ಲುಪ್ತವಾಗಿ ಹೋಗಿರುವುವು. ಪರೀಕ್ಷೆಯು ಸಮೀಪವಾಗಿರುತ್ತದಾದರೂ, ನಾನು ನಾಳೆಯೇ ಊರಿಗೆ ಹೊರಟುಹೋಗುವೆನು.

ಮಧು—ಆಗಬಹುದು.

ಶರತ್—ಬೇಕಾದರೆ ಈಗಲೇ ಹೊರಟರೂ ಹೊರಡುವೆನು.

ಮಧು—ಹಾ ದೈವವಾಯೇ! ಹೆಂಗಸರ ವಶೀಕಾರವಿದ್ಯೆಯೆಂಬುದು ಎಂತಹುದೋ? ಅವರ ಮೋಹಮಂತ್ರಬಲದಿಂದ ಜನರು ಅವರ ದೋಷಗಳನ್ನು ಗುಣಗಳನ್ನಾಗಿಯೂ ಅಲಂಕಾರಗಳನ್ನಾಗಿಯೂ ಎಣಿಸುವರಲ್ಲ!

ಶರತ್—ಮಧು, ನಿನಗೆ ಖಂಡಿತವಾಗಿಯೂ ಈ ಲೋಕದಲ್ಲಿ ಸುಖವೆಂಬುದಿರಲಾರದು. ಸ್ತ್ರೀಯಲ್ಲಿ ನಂಬುಗೆಯಿಲ್ಲದವನು ನಿತ್ಯ ದುಃಖಿ.

ಮಧು—ಏನಾದರೂ ಆಗಲಿ, ಸ್ತ್ರೀಯರ ವಿಚಾರ ನಮಗೆ ಬೇಡ. ನೀನು ಈಗ ಹೊರಡುವದಾದರೆ ನಿನ್ನ ಪ್ರಯತ್ನವೆಲ್ಲವೂ ವ್ಯರ್ಥವಾಗಿ ಹೋಗುವುದು.

ಹೀಗೆ ಹೇಳಿ ಮಧುಮಾಧವನು ಹೊರಟುಹೋದನು. ಶರಚ್ಚಂದ್ರನು ಒಬ್ಬನೇ ಮನೆಗೆ ಹಿಂತಿರುಗಿ ಬರುತ್ತಾ ದಾರಿಯಲ್ಲಿ ಏನೇನೋ ಯೋಚಿಸತೊಡಗಿದನು. ಅಷ್ಟುಹೊತ್ತಿಗೆ ಸರಿಯಾಗಿ ಒಬ್ಬ ಮುದುಕಿಯು ರೋದನಮಾಡುತ್ತಾ ದಾರಿಯಲ್ಲಿ ಬರುತಿರಲು, ಅವಳನ್ನು ನೋಡಿ ಶರತ್ತಿನ ಹೃದಯವು ಕರಗಿ ನೀರಾಗಿ ಹರಿದುಹೋಯಿತು. ಬಳಿಕ ಶರತ್ತು ಮುದುಕಿಯನ್ನು ಕುರಿತು—ತಾಯೀ ! ಏತಕ್ಕೆ ಹೀಗೆ ಅಳುವೆ ? ಎಂದು ಕೇಳಲಾಗಿ ಆಕೆಯು ಮತ್ತಷ್ಟು ಅಧಿಕವಾಗಿ ಅಳತೊಡಗಿದಳು. ಬೀದಿಯಲ್ಲಿ ಹೋಗುತಿದ್ದವರೆಲ್ಲರೂ ಬಂದು ಸೇರಿದರು ಇದನ್ನು ನೋಡಿ ವೃದ್ಧೆಯು ತನ್ನ ರೋದನವನ್ನು ದ್ವಿಗುಣಿತವನ್ನಾಗಿ ಮಾಡಿ ಜ್ಞಾನತಪ್ಪಿ ಕೆಳಗೆ ಬಿದ್ದುಬಿಟ್ಟಳು. ಆಕೂಡಲೆ ಶರತ್ತು ಆಕೆಯನ್ನು ಹಿಡಿದೆತ್ತಿ ಶೈತ್ಯೋಪಚಾರಮಾಡಿ—ಅಮ್ಮ. ನಿನ್ನ ಕಷ್ಟವೇನು ? ಹೇಳು, ಎಂದನು.

ಮುದುಕಿ—ನನ್ನ ಕಷ್ಟವನ್ನು ನಿವಾರಣೆ ಮಾಡುವರಾರು ? ಆತ್ಮೀಯರನ್ನು ಸರ್ವಸ್ವವನ್ನು ಕಳೆದುಕೊಂಡು ಬಾಕಿ ಉಳಿದ ಮೊಮ್ಮಗಳೊಬ್ಬಳನ್ನು ಸಾಕುತ್ತಿದ್ದೆನು. ಆ ಹುಡುಗಿಗೂ ಬಲವತ್ತರವಾದ ರೋಗವು ಪ್ರಾಪ್ತವಾಗಿ, ಆಕೆಯು ಬದುಕುವಂತಿಲ್ಲ. ಹಾ ದೈವವೇ ! ನನಗಿನ್ನೂ ಮರಣವು ಬರಲಿಲ್ಲವೇತಕೆ ? ಎಂದು ಗಟ್ಟಿಯಾಗಿ ಉರಸ್ತಾಡನ ಮಾಡಲುಪಕ್ರಮಿಸಿದಳು. ಇದನ್ನು ನೋಡಿ, ಅಲ್ಲಿದ್ದವರಲ್ಲಿ ಕೆಲವರು—ಇದೊಂದು ಬಗೆಯ ಜೀವನೋಪಾಯವೆಂದು ಹೇಳುತ್ತಾ ಹೊರಟುಹೋದರು. ಮತ್ತೆ ಕೆಲವರು—ಇತರರ ದುಃಖವನ್ನು ಕಟ್ಟಿಕೊಂಡು ನಮಗಾಗುವುದೇನು ? ಎಂದು ತೆರಳಿದರು. ಇನ್ನು ಕೆಲವರು, ಇಲ್ಲಿದ್ದರೆ ಪ್ರಾಣಕ್ಕೇನು ಬರುವುದೊ ಎಂದು ಕಾಲಿಗೆ ಬುದ್ಧಿ ಹೇಳಿದರು. ಅಂತೂ ಬಂದು

ಕ್ಷಣ ಮಾತ್ರದಲ್ಲಿಯೇ ಅಲ್ಲಿದ್ದವರೆಲ್ಲರೂ ಕಾರಣಾಂತರಗಳಿಂದ ಯಥಾಯಥಾ ತೆರಳಿದರು. ಅನಂತರ ಶರತ್ತು—ಅಮ್ಮ ! ನೀನು ವೈದ್ಯರಲ್ಲಿ ಹೋಗಿ ಔಷಧವನ್ನು ತಂದು ಕೊಟ್ಟೆಯಾ ? ಎಂದು ಕೇಳಿದನು.

ಮುದುಕಿ—ನಾನು ಬಡವಳೆಂದು ತಿಳಿದು ಯಾವ ವೈದ್ಯರೂ ನನ್ನ ಪ್ರಾರ್ಥನೆಗೆ ಕಿವಿಗೊಡಲಿಲ್ಲ. ಆ ಮಗುವನ್ನು ಆಸ್ಪತ್ರೆಗೆ ಸಾಗಿಸುವುದಕ್ಕೂ ನನಗೆ ಶಕ್ತಿಸಾಲದು.

ಶರತ್—ಹಾಗಾದರೆ ನೀನಿರುವುದೆಲ್ಲಿ ?

ಮುದುಕಿ—ರಾತಿದೇವನ ಗಲ್ಲಿಯಲ್ಲಿ ೨೬ ನೇ ನಂಬರು ಮನೆಯಲ್ಲಿ.

ಶರಚ್ಚಂದ್ರನು ಸಮೀಪದಲ್ಲಿಯೇ ಹೋಗುತ್ತಿದ್ದ ಒಂದು ಬಂಡಿಯನ್ನು ಬಾಡಿಗೆಗೆ ತೆಗೆದು ವೃದ್ಧೆಯನ್ನು ಜತೆಯಲ್ಲಿಯೇ ಕುಳ್ಳಿರಿಸಿಕೊಂಡು, ಆಕೆಯ ಮನೆಯ ಕಡೆಗೆ ತೆರಳಿದನು.

ವೃದ್ಧೆಯು ಶುಭವಾದ ಅಂತಃಕರಣದಿಂದ ಶರಚ್ಚಂದ್ರನಿಗೆ ಪರಿಪರಿಯಾಗಿ ಆಶೀರ್ವಾದ ಮಾಡಿದಳು.



## ಐದನೆಯ ಸಂಧಿ.

### ಮನೋರೋಗ

ಶರಚ್ಚಂದ್ರನು ಮರುದಿನ ಮಧ್ಯಾಹ್ನ ೨ ಗಂಟೆಯ ಹೊತ್ತಿನಲ್ಲಿ ತನ್ನ ವಾಸಸ್ಥಳಕ್ಕೆ ಬಂದನು. ವಿನೋದಿನಿಯು ಯೋಚನೆಯಿಂದಲೂ, ರಾತ್ರಿಯೆಲ್ಲಾ ರೋಗಿಯ ಪಕ್ಕದಲ್ಲಿ ನಿದ್ರಾಹಾರವಿಲ್ಲದೆ ಕುಳಿತಿದ್ದುದರಿಂದಲೂ, ಆತನು ಉಷ್ಣೋದ್ರೇಕದಿಂದ ವಿಶೇಷವಾದ ಅಸ್ವಸ್ಥತೆಯನ್ನು ಹೊಂದಿ ನರಳಲಾರಂಭಿಸಿದನು.

ಈತನ ಯತ್ನದಿಂದ ರೋಗಿಗೆ ಗುಣಕ್ಕೆ ಬಂದಿತು. ರೋಗಿಯ ರೋಗವು ಈತನಲ್ಲಿ ಸಂಕ್ರಮಿಸಿತೋ ಎಂಬಂತೆ, ಶರಚ್ಚಂದ್ರನು ಮನೆಗೆ ಬಂದಕೂಡಲೆ ಹಾಸಿಗೆ ಹಿಡಿದು ಮಲಗಿದನು. ಸಮೀಪದಲ್ಲಿಯೆ ವಾಸವಾಗಿದ್ದ ಸ್ವದೇಶೀ ವೈದ್ಯನು ಶರತ್ತಿನ ನಾಡಿಯನ್ನು ಹಿಡಿದು ನೋಡಿ-"ಲಂಘನಂ ಪರಮೌಷಧಂ," ಎಂದು ಹೇಳಿ ಹೊರಟು ಹೋದನು.

ಸಾಮಾನ್ಯವಾಗಿ ರಾತ್ರಿಯ ಕಾಲದಲ್ಲಿ ರೋಗದ ಯಾತನೆಯು ಅಧಿಕವಾಗಿ ಕಾಡುಬರುವುದು. ಶರಚ್ಚಂದ್ರನು ಅಧಿಕವಾದ ಜ್ವರದ ಯಾತನೆಯಿಂದ ವ್ಯಾಕುಲಿತನು ಉನ್ಮತ್ತನಂತೆ ಮಾತನಾಡಲಾರಂಭಿಸಿದನು. ಆಗ ಆತನು ಸಮೀಪದಲ್ಲಿ ಕುಳಿತಿದ್ದ ಸೇವಕನನ್ನು ನೋಡಿ—ವಿನೋದಿನಿಯೆಲ್ಲಿ ? ಅವಳಿನ್ನೂ ಏತಕ್ಕೆ ಬರಲಿಲ್ಲ? ಎಂದು ಹಂಬಲಿಸಿದನು.

ಸೇವಕನು, ವಿನೋದಿನಿ ಯಾರೆಂಬುದನ್ನು ಅರಿಯದವನಾಗಿ ಶರತ್ತಿಗೆ ಭ್ರಾಂತಿ ಯುಂಟಾಗಿರುವುದೆಂದು ಸುಮ್ಮನೇ ಕುಳಿತಿದ್ದನು. ಶರಚ್ಚಂದ್ರನು ಮತ್ತೊಂದುಸಲ—ಮಧುಮಾಧವ ! ಎಂದು ಗಟ್ಟಿಯಾಗಿ ಕೂಗಿದನು.

ಸೇವಕನು ಏನೂ ಮಾತನಾಡಲಿಲ್ಲ. ಹೀಗೆಯೇ ರಾತ್ರಿಯು ಕಳೆದು ಹೋಯಿತು. ಬೆಳಗಾದ ಕೂಡಲೆ ಮಧುಮಾಧವನು ಶರತ್ತನ್ನು ನೋಡಲು ಮನೆಗೆ ಬಂದು ಸೇವಕನನ್ನು ವಿಚಾರಿಸಿದನು. ಸೇವಕನು ಶರಚ್ಚಂದ್ರನಿಗೆ ಜ್ವರವು ಬರುತ್ತಿದೆಯೆಂದು ಹೇಳಲಾಗಿ, ಮಧುಮಾಧವನು ಆಕೂಡಲೆ ಶರತ್ತಿನ ಹತ್ತಿರಕ್ಕೆ ಬಂದು ರೋಗಿಯ ಲಕ್ಷಣವೆಲ್ಲವನ್ನು ನೋಡಿ ಭಯಪಟ್ಟು ಯೋಚಿಸುತ್ತ ಕುಳಿತನು. ಶರಚ್ಚಂದ್ರನು ಮಧುವು ಬಂದನೆಂದು ತಿಳಿದು—ಮಧು ! ನಾನು ಜ್ವರದ ಯಾತನೆಯನ್ನು ತಡೆಯಲಾರೆ, ನಾನು ಈಸಲ ಉಳಿಯುವ

ಹಾಗಿಲ್ಲ. ನಾನು ಬದುಕಿರುವ್ರವರೊಳಗಾಗಿ ವಿನೋದಿನಿಯನ್ನು ನೋಡಲಾರೆನೆಂದು ತೋರುವುದು. ನಿನ್ನೆಯ ರಾತ್ರಿ ಸ್ವಪ್ನದಲ್ಲಿ ವಿನೋದಿನಿಯನ್ನು ಕಂಡೆನು. ಆಕೆಯು ನಕ್ಷತ್ರ ಮಂಡಲದಲ್ಲಿ ಸೇರಿಹೋಗಿ ಥಳಥಳ ಹೊಳೆಯುತ್ತಿದ್ದಳು. ನಾನು ಅವಳಲ್ಲಿಗೆ ಹೋಗಲು ಯತ್ನ ಮಾಡುತ್ತಿರುವಾಗ, ಆಕೆಯು ಹೇಳಿದ್ದೇ ನೆಂದರೆ:—ಶರಚ್ಚಂದ್ರ ! ನಿನ್ನ ಪ್ರಯತ್ನವು ನಿಷ್ಫಲವಾದುದು. ನಾನಿ ರುವ ಸ್ಥಳಕ್ಕೆ ನೀನು ಬರಲಾರೆ. ನಾನು ಇಲ್ಲಿಗೆ ಹಿಂತಿರುಗಿ ಬರುವ ಸಂಭವವಿಲ್ಲ. ನನಗಾಗಿ ನೀನು ಅಳಬೇಡ. ನಾನು ಇದನ್ನು ಕೇಳಿ ಅವಳನ್ನು ಹಿಡಿದುಕೊಳ್ಳುವುದಕ್ಕೆ ಹೋದೆನು. ಆಕೆಯು ಹಿಂದೆ ಹಿಂದೆ ಸರಿದು ದೂರ ಹೊರಟುಹೋದಳು. ಮುಂದಕ್ಕೆ ಹೋಗಲು ನನಗೆ ಶಕ್ತಿಯಿಲ್ಲದೆ, ಇದ್ದಲ್ಲಿಯೇ ನಾನು ಆಕೆಯನ್ನು ಬಹಳವಾಗಿ ಕೇಳಿಕೊಂಡೆನು. ಆಕೆಯು ನನ್ನ ಮಾತಿಗೆ ಕಿವಿಗೊಡದೆ ಹೊರಟೇ ಹೋದಳು. ನಾನು ಅಪಾರವಾದ ಮನೋವ್ಯಥೆಯಿಂದ ಮೂರ್ಛೆ ಹೋಗಿ ಬಿದ್ದುಬಿಟ್ಟೆನು. ನೀನು ಇಲ್ಲಿಗೆ ಬಂದಕೂಡಲೆ ನನಗೆ ನಿದ್ರಾಭಂಗವಾಗಿ, ಆ ನನ್ನ ವ್ಯಥೆಯು ದೂರವಾಯಿತು. ಮಧು ! ಈ ದುಷ್ಟಸ್ವಪ್ನಕ್ಕೆ ಕಾರಣವೇನು ? ನನಗೆ ಮುಂದೇನಾಗಬಹುದು? ಎಂದು ಕೇಳಿದನು.

ಮಧು—ಶರಚ್ಚಂದ್ರ ! ರೋಗಿಗಳ ಸ್ವಪ್ನಕ್ಕೆ ಅರ್ಥವಿಲ್ಲ. ವಿನೋದಿನಿಯನ್ನು ನೋಡಬೇಕೆಂಬ ಹಂಬಲಿಕೆಯಿಂದ ನಿನಗೆ ಹೀಗಾಗಿರುವುದು. ಆಕೆಯು ಕೂಡಲೆ ಇಲ್ಲಿಗೆ ಬರುವಂತೆ ಕಾಗದ ಬರೆಯುವೆನು.

ಶರತ್—ನಾನು ಬರೆದ ಕಾಗದಗಳಿಗೆ ಜವಾಬ್ ಬರೆಯದವಳು, ಈ ಕಾಗದ ಕಂಡಕೂಡಲೆ ಇಲ್ಲಿಗೆ ಬರುವಳೆ ? ಇಲ್ಲ, ಆಕೆಗೆ ಅದುದೋ ಸಂಕಟ ಪ್ರಾಪ್ತವಾಗಿರಬಹುದು.

ಮಧು—ಅವನ್ನೆ ಕುರಿತು ನೀನು ಸುಮ್ಮನೆ ಯೋಚಿಸ ಬೇಡ. ನಾನು ಕಾಗದವನ್ನು ರಿಜಿಸ್ಟರುಮಾಡಿ ಹಾಕುವೆನು. ಕಾಗದ ಮುಟ್ಟಿದ ಕೂಡಲೆ, ಆಕೆಯು ಹೊರಟು ಬಾರದೇ ಬರುವಳು.

ಶರತ್— (ಕಳವಳಗೊಂಡು) ವಿನೋದಿನಿ! ವಿನೋದಿನಿ! ನೀನೇತಕೆ ಬರುವೆ ? ನನ್ನ ವಿಷಯದಲ್ಲಿ ನಿನ್ನ ಹೃದಯವು ಪಾಷಾಣ. ವಿನೋದಿನಿ ! ಬಾ, ಬಾ. ಕಷ್ಟಕಾಲದಲ್ಲಿ ಪರೀಕ್ಷಿಸಬೇಡ. ನಾನು ಮಾಡಿದ್ದು ತಪ್ಪು.

ಶರಚ್ಚಂದ್ರನು ಈ ರೀತಿಯಲ್ಲಿ ಹಂಬಲಿಸುತ್ತಿದ್ದನು. ಮಧು ಮಾಧವನು ಇದನ್ನು ಗಮನಿಸದೆ ಕಾಗದವನ್ನು ಬರೆದು ವಿನೋದಿನಿಗೆ ಕಳುಹಿಸಿದನು. ಅನಂತರ ಶರತ್ತಿನ ಶುಶ್ರೂಷೆಯಲ್ಲಿಯೇ ನಿರತನಾದನು.



## ಆರನೆಯ ಸಂಧಿ.

### ನೂತನವ್ಯಾಧಿ.

ಒಂದು ವಾರವು ಕಳೆದುಹೋಯಿತು. ಎಂದಿನಂತೆ ಶರಚ್ಚಂದ್ರನು ಹಾಸಿಗೆಹಿಡಿದು ಬಿದ್ದಿರುವನು. ವಾಚಕ ಮಹಾಶಯ ! ನಾವು ಇಷ್ಟು ಕಠಿಣರಾಗಿರಬಾರದು. ರೋಗಿಯ ಯೋಗಕ್ಷೇಮವನ್ನು ವಿಚಾರಿಸದೆ ಸ್ವಾರ್ಥನೇ ಹೆಚ್ಚೆಂದು ನಾವು ತಿಳಿದಿರುವುದಾದರೆ ದೇವರು ಮೆಚ್ಚನು. ಬೇಗಬನ್ನಿರಿ, ಎಲ್ಲರೂಸೇರಿ ಶರಚ್ಚಂದ್ರನಲ್ಲಿಗೆ ಹೋಗಿ, ಆತನನ್ನು ಸಾಧ್ಯವಾದಷ್ಟು ಸಂತೈಸೋಣ !

ಮಧ್ಯಾಹ್ನ ಸುಮಾರು ೩ ಗಂಟೆಯು ಹೊತ್ತಿರಬಹುದು. ಬಿಸಿಲಿನ ತಾಪವು ಸಹಿಸಲಸದಳವು. ಶರಚ್ಚಂದ್ರನು ಅದೇ ಕೋಣೆಯಲ್ಲಿ ಅದೇ ಹಾಸಿಗೆಯಲ್ಲಿ ಕಣ್ಣು ಮುಚ್ಚಿ ಮಲಗಿದ್ದನು. ಆತನ

ಹಾಸಿಗೆಯ ಪಾರ್ಶ್ವದಲ್ಲಿ ತ್ರಿಪುರಸುಂದರಿಯೊಬ್ಬಳು ಕುಳಿತು ಕೊಂಡು ಗಾಳಿ ಹಾಕುತ್ತಿದ್ದಳು. ಆಕೆಯೇ ವಿಲಾಸಿನಿ, ಆಕೆಯ ಸಮೀಪದಲ್ಲಿ ಮತ್ತೊಂದು ವ್ಯಕ್ತಿಯು ಕುಳಿತುಕೊಂಡು ರೋಗಿ ಯನ್ನು ನೋಡುತ್ತಿದ್ದಿತು. ಆ ವ್ಯಕ್ತಿಯು ಹರಮಣಿಯಾಗಿದ್ದಳು. ಇವರಿಬ್ಬರು ಹೊರತಾಗಿ ಆ ಕೋಣೆಯಲ್ಲಿ ಹೊಸಬರಾರು ಇರ ಲಿಲ್ಲ. ಮಧುಸೂದನನು ಮತ್ತೊಂದು ಕೋಣೆಯಲ್ಲಿ ಕುಳಿತು ಅರ್ಧಸಿಪ್ರೆಯಿಂದ ತಲೆಯನ್ನು ತೂಗಾಡಿಸುತ್ತಿದ್ದನು. ಆತನ ಪಕ್ಕದಲ್ಲಿ ಹುಡುಗನೊಬ್ಬನು ಕುಳಿತಿದ್ದನು. ಅವನನ್ನು ವಿಲಾಸಿ ನಿಯ ಸಾಕುಮಗನೆಂದು ಜನರು ಕರೆಯುತ್ತಿದ್ದರು.

ನಾವು ಶರತ್ತನ್ನು ನೋಡುವುದಕ್ಕೆ ಹೋದಕೂಡಲೆ ಅವ ನಿಗೆ ನಿದ್ರಾಭಂಗವಾಯಿತು. ಆತನು ಕಣ್ಣುಬಿಟ್ಟು ಸುತ್ತಲೂ ನೋಡಿದನು. ವಿಲಾಸಿನಿಯು ಆತನ ಕಣ್ಣಿಗೆ ಗೋಚರಳಾದಳು. ಶರತ್ತು ವಿಲಾಸಿನಿಯನ್ನು ನೋಡಿ ಮತ್ತೆ ಕಣ್ಣು ಮುಚ್ಚಿದನು. ಇದನ್ನು ನೋಡಿ, ವಿಲಾಸಿನಿಯು--ಶರಚ್ಚಂದ್ರ! ಎಂದು ಕೂಗಿದಳು.

ಶರತ್—(ಕಣ್ಣುತೆರೆದು) ವಿಲಾಸ !

ವಿಲಾಸಿನಿ—ಅಹುದು, ವಿಲಾಸ.

ಶರತ್—ವಿನೋದ !

ವಿಲಾಸಿನಿ—ವಿನೋದಳು ಸ್ವಸ್ಥಳಾಗಿರುವಳು.

ಶರತ್—ನನ್ನ ಕಾಗದ ?

ಈ ಸಮಯದಲ್ಲಿ ಹರಮಣಿಯು ಕಣ್ಣನ್ನು ಮಿಟಕಿಸಿದಳು. ವಿಲಾಸಿನಿಯು ಅದರ ಮರ್ಮವನ್ನು ತಿಳಿದು—ಶರತ್ ! ಬಂದಿತು. ವಿನೋದಿನಿಯು ಗರ್ಭಿಣಿಯಾಗಿರುವುದರಿಂದ, ನಿನ್ನ ಸ್ಥಿತಿಯನ್ನು ಆಕೆಗೆ ತಿಳಿಸಿದರೆ ತೊಂದರೆ ಯಾಗಬಹುದೆಂಬ ಶಂಕೆಯಿಂದ ಕಾಗದವನ್ನು ನಾನು ಆಕೆಗೆ ತೋರಿಸಲಿಲ್ಲ,

ಶರಚ್ಚಂದ್ರನು ಇದನ್ನು ಕೇಳಿ ಒಂದುಬಗೆಯ ನಗೆಯನ್ನು ನಕ್ಕು—ಬಹಳ ಒಳ್ಳೆಯ ಕೆಲಸ ಮಾಡಿದೆ, ಎಂದನು.

ವಿಲಾಸಿನಿ—ಅಂಚೆಯವನು ಕಾಗದವನ್ನು ತಂದು ಕೊಡುವಾಗ, ನಾನು ಬೇರೆ ಕೆಲಸದಲ್ಲಿ ಇದ್ದೆನು. ಆಗ ಕಾಗದದ ಶಿರೋನಾಮವನ್ನು ನೋಡುವಷ್ಟು ಅವಕಾಶವಿಲ್ಲದೆ, ಅದನ್ನು ಬಿಚ್ಚಿ ಓದಿದೆನು. ಕಾಗದದಲ್ಲಿ ನಿನ್ನ ಸ್ಥಿತಿಯನ್ನು ತಿಳಿದಕೂಡಲೆ, ನನಗೆ ಹೇಳಲಸಾಧ್ಯವಾದ ಸಂಕಟವುಂಟಾಗಿ, ಈ ಸಂಗತಿಯನ್ನು ವಿನೋದಿನಿಗೆ ತಿಳಿಸಲು ಶಕ್ತಿಸಾಲದೇ ಹೋಯಿತು. ಬಳಿಕ ನಾನು ಆವುದೋ ವ್ಯಾಜದಿಂದ ಇಲ್ಲಿಗೆ ಬಂದೆನು.

ಶರತ್—ವಿಲಾಸ! ನಿನ್ನ ಪರದುಃಖದುಃಖಿತೆಯು ಅಪಾರವಾದುದು. ನಿನ್ನ ಉಪಕಾರಕ್ಕೆ ಪ್ರತಿಯಾಗಿಮಾಡಲು, ಈ ಜನ್ಮದಲ್ಲಿ ನನಗೆ ಯಾವ ಸಾಮಗ್ರಿಯೂ ಇಲ್ಲ.

ವಿಲಾಸಿನಿ—ಶರಚ್ಚಂದ್ರ! ನಿನ್ನ ವಿಷಯದಲ್ಲಿ ನನ್ನ ಹೃದಯವು ಎಷ್ಟರಮಟ್ಟಿಗೆ ತತ್ತರಗುಟ್ಟುವುದೆಂಬುದನ್ನು ನೀನು ಬಲ್ಲೆಯಾ? ದೇವರು ನಿನಗೆ ಆರೋಗ್ಯಭಾಗ್ಯವನ್ನು ದಯಪಾಲಿಸಲಿ. ನೀನು ಸುಖವಾಗಿರಬೇಕೆಂಬುದೇ ನನ್ನ ಬಯಕೆ.

ಹೀಗೆ ಹೇಳಿ ವಿಲಾಸಿನಿಯು ಕಣ್ಣುಗಳಿಂದ ಒಂದೆರಡು ತೊಟ್ಟು ನೀರನ್ನು ಸುರಿಸಿದಳು. ಶರಚ್ಚಂದ್ರನು ಇಷ್ಟನ್ನುವುದರೊಳಗಾಗಿ ಕಣ್ಣುಮುಚ್ಚಿದ್ದನು. ವಿಲಾಸಿನಿಯು ಕಣ್ಣನ್ನು ಒರಸಿಕೊಂಡು ಮತ್ತೆ ಶರತ್ತನ್ನು ಕಣ್ಣಾರೆ ನೋಡಲಾರಂಭಿಸಿದಳು. ಆಗ ಆಕೆಯ ಹೃದಯದಲ್ಲಿ ಉಂಟಾದ ಯೋಚನೆಯು ಈ ರೀತಿಯಾಗಿದ್ದಿತು.— ಮಾನವನ ಶರೀರವು ರಕ್ತಮಾಂಸಗಳಿಂದ ತುಂಬಿರುವುದು. ಹೃದಯವಾದರೋ ದುರಭಿಪ್ರಾಯಗಳಿಗೆ ತವರುಮನೆ. ಆದರೆ, ನನ್ನ ಹೃದಯದಲ್ಲಿ ಈ ಭಾವವು ಉಂಟಾಗಲು ಕಾರಣವೇನು? ಯಾವ ದೇವತೆಗೆ

ತ್ತಾನೇ ಈ ದುರಾಶೆಯಿಲ್ಲ. ದುರಾಶೆಯಿಲ್ಲದವಳು ಪ್ರಜ್ಞಾದೇವಿಯಾಗಲಿ. ನನಗಾದರೋ ಆ ದೇವತ್ವ ಬೇಕಿಲ್ಲ. ನನ್ನ ಕಾಮವು ಬಲವತ್ತರವಾದುದು. ನಾನು ಬದುಕಿರುವಾಗ ಅದು ಪಿಶಾಚದಂತೆ ನನ್ನನ್ನು ಬಾಧಿಸಲಿ ; ಮರಣಾನಂತರದಲ್ಲಿ ನನಗೆ ನರಕವಾಸ ವುಂಟಾಗಲಿ. ನಾನು ಅದಾವುದಕ್ಕೂ ಹೆದರತಕ್ಕವಳಲ್ಲ. ಆದರೆ ಪ್ರಕೃತ ಕಾಮನೆಯನ್ನು ಮಾತ್ರ ನಾನು ತಡೆಯಲಾರದವಳಾಗಿರುವೆನು. ಲೋಕದಲ್ಲಿ ಎಲ್ಲರೂ ಸ್ವಾರ್ಥಪರಾಯಣರು ; ಯಾರು ತಾನೇ ಸ್ವಾರ್ಥಕ್ಕಾಗಿ ಪರಾರ್ಥವನ್ನು ನಾಶಮಾಡಿಲ್ಲ ? ಯಾವರಾಜನು ಜನರ ಹೃದಯರಕ್ತದಿಂದ ತನ್ನ ಕೈಕಾಲುಗಳನ್ನು ತೊಳೆದುಕೊಳ್ಳದೇ ಕಿರೀಟವನ್ನು ತಲೆಯಮೇಲೆ ಧಾರಣಮಾಡಿರುವನು? ವಿನೋದಿನಿಯು ನನಗೆ ಶತ್ರುವಲ್ಲ ; ತಂಗಿಯು. ತಂಗಿಯಾದಮಾತ್ರಕ್ಕೆ ಏನು? ನನ್ನ ಕೆಲಸಕ್ಕೆ ತಂಗಿಯೇ ಅಡ್ಡವಾಗಿರುವಾಗ, ಆಕೆಯೇ ನನಗೆ ಕಂಟಕ ಸ್ವರೂಪಳು. ಎಷ್ಟೋ ಜನರು ಸ್ವಾರ್ಥಸಾಧನೆಗಾಗಿ ನರಹತ್ಯಾ, ಭ್ರಾತೃಹತ್ಯಾ, ಪುತ್ರಹತ್ಯಾ ಇತ್ಯಾದಿಗಳನ್ನು ಮಾಡಿಲ್ಲವೆ ? ಎಲ್ಲರಿಗಿರುವಂತೆಯೇ ನನಗೂ ಸ್ವಾರ್ಥವಿರುವುದು. ಅದಕ್ಕಾಗಿನಾನು ಇತರರ ಯೋಗಕ್ಷೇಮವನ್ನು ಚಿಂತಿಸುತ್ತ ಕುಳಿತರೆ ನನ್ನ ಕೆಲಸವು ನೆರವೇರಿದಾತೆಯೋ ಸ್ವಃ

ವಿಲಾಸಿನಿಯು ಇದೇ ರೀತಿಯಲ್ಲಿ ಬಗೆಬಗೆಯಾಗಿ ಯೋಚಿಸುತ್ತಾ ಶರಚ್ಚಂದ್ರನಿಗೆ ಅವಿಚ್ಛಿನ್ನವಾಗಿ ಶುಶ್ರೂಷೆಯನ್ನು ಮಾಡಿದಳು. ಕ್ರಮಕ್ರಮವಾಗಿ ಶರತ್ತಿಗ ರೋಗದಿಂದ ಬಿಡುಗಡೆಯಾಗುತ ಬಂದಿತು. ಶರಚ್ಚಂದ್ರನು ಒಂದು ಬಗೆಯ ರೋಗದಿಂದ ಮುಕ್ತನಾದರೂ, ಮತ್ತೊಂದು ಬಗೆಯ ರೋಗವು ಅವನನ್ನು ಆವರಿಸಿಕೊಂಡಿತು. ಈ ನೂತನ ವ್ಯಾಧಿಯಿಂದ ಶರತ್ತಿನ ಮುಖದಲ್ಲಿ ಕಾಂತಿಯಾಗಲಿ, ದೇಹದಲ್ಲಿ ತ್ರಾಣವಾಗಲಿ, ಮನದಲ್ಲಿ ಶಾಂತಿಯಾಗಲಿ ಇರ

ತಿಲ್ಲ. ಈ ಲಕ್ಷಣಗಳಿಂದ ಆತನು ಬೇರೊಬ್ಬ ಮನುಷ್ಯನಾಗಿ ಪರಿಣಮಿಸುತ್ತ ಬಂದನು.

ಹೀಗಿರಲೊಂದುದಿನ ಶರಚ್ಚಂದ್ರನು ತನ್ನ ಕೋಣೆಯಲ್ಲಿ ಏಕಾಕಿಯಾಗಿ ಕುಳಿತಿರಲು, ಹರಮಣಿಯು ಅಲ್ಲಿಗೆ ಬಂದು ಸೇರಿದಳು. ಇವಳನ್ನು ನೋಡಿ ಶರತ್ತು— (ನಗುತ್ತಾ) ವರ್ತಮಾನವೇನು? ಎಂದು ಕೇಳಿದನು.

ಹರ—ವಿಲಾಸಿನಿಯು ತಾನು ಬರುವುದು ಕೊಂಚ ಸಾವಕಾಶವಾಗುವುದೆಂದು ನನ್ನನ್ನು ಮೊದಲೇ ಕಳುಹಿಸಿರುವಳು.

ಶರತ್—ವಿಲಾಸಿನಿಯು ಸದ್ಗುಣಕ್ಕೆ ಪಾರವೇ ಇಲ್ಲ. ವಿನೋದಿನಿಯಾದರೋ ನನ್ನನ್ನು ಬಂದೇ ತಡನೆಗೆ ಕಾಲಿನಿಂದ ಒದ್ದು ದೂರ ಮಾಡಿರುವಳು.

ಹರ—(ನಕ್ಕು) ಕಾಲಿನಲ್ಲಿ ಒದೆಯೋಣ ವೆಂದರೇನು?

ಶರತ್—ಗೊತ್ತಾಗುವುದಿಲ್ಲವೆ?

ಹರ—ನನಗೆ ಯಾವುದೂ ಗೊತ್ತಾಗಲೇ ಇಲ್ಲ.

ಶರತ್— ಕೇಳು, ಆಕೆಯು ನನ್ನನ್ನು ಸಂಪೂರ್ಣವಾಗಿ ಮರತೇ ಬಿಟ್ಟಿರುವಳು. ಆಕೆಯು ಗರ್ಭಿಣಿಯೆಂಬ ವಿಷಯವನ್ನು ನನಗೆ ಆಕೆಯು ತಿಳಿಸಿದವಳೇ ಅಲ್ಲ.

ಹರ—(ಚಮತ್ಕೃತಳಾಗಿ) ಏನು, ವಿನೋದಿನಿಯು ಗರ್ಭಿಣಿಯೇ? ಹೇಳಿದವರಾರು?

ಶರತ್—ವಿಲಾಸಿನಿ.

ಹರ—ಶರಚ್ಚಂದ್ರ! ಈ ಸಂಗತಿಯು ನನಗೆ ಗೊತ್ತಾಗಲು ಕಾರಣವೇನಿರುವುದ? ಮನೆಯಲ್ಲಿ ಯಾರೂ ಇಂತಹ ಸಂಗತಿಗಳನ್ನು ನನ್ನ ಮುಂಧೆ ಹೇಳುವುದಿಲ್ಲ. ಆದರೆ—

ಶರತ್—(ಆದರದಿಂದ) ಆದರೆ,—ಏನು?

ಹರ—ನಾವು ಇಲ್ಲಿಗೆ ಹೊರಟು ಬರುವಾಗ, ವಿನೋದಿನಿಯು ಕೈಯ್ಯಲ್ಲಿ ಒಂದು ಕಾಗದವನ್ನು ಹಿಡಿದುಕೊಂಡು ವಿಲಾಸಿನಿಯು ಒಳಗೆ ಬಂದು, ಏನೇನೋ ಮಾತನಾಡಿದಳು. ಆ ಸಂದರ್ಭದಲ್ಲಿ ಈ ವಿಷಯವು ನನಗೆ ಕೊಂಚವೂ ಗೊತ್ತಾಗಲಿಲ್ಲ.

ಶರತ್—ಅದು ನನ್ನ ಕಾಗದವೇ? ನಾನು ಬರದ ಕಾಗದಗಳು ಆಕೆಗೆ ಸೇರಿರಬೇಕು.

ಹರ—ಯಾವಕಾಗದ ಬಂದರೂ, ನಾನು ತಪ್ಪದೇ ಆಕೆಗೆ ಕೊಡುವೆನು. ಕಾಗದವು ತಲಪುವುದಿಲ್ಲವೆಂದರೇನು?

ಶರಚ್ಚಂದ್ರನು ಈ ಮಾತನ್ನು ಕೇಳಿ, ಕಾಗದವು ತಲಪಿದ್ದರೆ ವಿನೋದಿನಿಯು ಎಂದಿಗೂ ಬರದೇ ಇರತಕ್ಕವಳಲ್ಲವೆಂಬ ನಂಬುಗೆಯಿಂದ, ಹರಮಣಿಯಲ್ಲಿ ಸಂಶಯಪಟ್ಟವನಾಗಿ,— ಕಾಗದವು ತಲಪಿರಲಿಕ್ಕಿಲ್ಲ, ಒಂದುವೇಳೆ ತಲಪಿದ್ದಿದ್ದರೆ, ಆಕೆಯು ಬಂದೇ ಬರುತಿದ್ದಳು, ಎಂದನು.

ಹರ—ಸ್ವಾಮಿನ್, ತಮ್ಮೊಡನೆ ನಾನು ಸುಳ್ಳುಹೇಳಬೇಕೆ? ಅದರಲ್ಲಿಯೂ ಇದು ಪರಿಹಾಸಕ್ಕೆ ಕಾಲವೆ?

ಶರತ್—(ಕೋಪದಿಂದ) ಸುಳ್ಳುಗಾರಳಾದ ನಿನ್ನ ಯಜಮಾನಿಯೆಲ್ಲಿ?

ಹರ—ನನಗೆ ಗೊತ್ತಿಲ್ಲ.

ಶರತ್— (ಹೆಚ್ಚುಕೋಪದಿಂದ) ರಂಡೆ! ನನ್ನೆದಿರಿಗೆ ನಿಲ್ಲಬೇಡ, ದೂರ ತೊಲಗು.

ಹರ— (ನಡುಗುತ್ತಾ) ಸ್ವಾಮಿನ್, ನನ್ನ ತಪ್ಪೇನಿರುವುದು? ನಾನು ಕಂಡು ಕೇಳಿದ್ದನ್ನು ತಮ್ಮಲ್ಲಿ ತಿಳಿಸಿದೆನು. ಇದಕ್ಕಾಗಿ ತಾವು ಕೋಪಮಾಡಬಹುದೇ?

ಶರತ್—ನೀನು ಪಿಶಾಚಿ, ನೀನು ರಾಕ್ಷಸಿ, ನೀನು ಮನೆ ಘಾತುಕಿ, ನೀನು ಇಲ್ಲಿ ನಿಲ್ಲಬೇಡ, ಹೊರಟುಹೋಗು.

ಹರಮಣಿಯು ಕಣ್ಣೀರು ಸುರಿಸುತ್ತಾ ಹೊರಗೆ ಹೊರಟು ಹೋಗಿ ಬಿಕ್ಕಿಬಿಕ್ಕಿ ಅಳಲಾರಂಭಿಸಿದಳು. ಇದನ್ನು ಕೇಳಿ ಶರಚ್ಚಂದ್ರನು ಕಳವಳಗೊಂಡವನಾಗಿ ದಿಕ್ಕು ತೋರದೇ ಹಾಸಿಗೆಯಲ್ಲಿ ಮಲಗಿದನು.

---

## ಏಳನೆಯ ಸಂಧಿ.

### ವಿಕಾರ

ಮಧ್ಯಾಹ್ನ ಸುಮಾರು ಒಂದು ಗಂಟೆಯ ಸಮಯದಲ್ಲಿ ವಿಲಾಸಿನಿಯು ಶರಚ್ಚಂದ್ರನ ಬಳಿಗೆ ಬರುತ್ತಿದ್ದಳು. ಮಾರ್ಗದಲ್ಲಿ ಹರಮಣಿಯು ಆಕೆಯನ್ನು ನೋಡಿ— ವಿಲಾಸ ! ರೋಗವು ಹಿಡಿದಿದೆ, ಎಂದಳು.

ವಿಲಾಸ—ಔಷಧ ?

ಹರ—ಅದೇತಕೆ ? ರೋಗವು ಹೆಚ್ಚಲಿ.

ವಿಲಾಸ—ಆಮೇಲೆ?

ಹರ—ನಾನೀಗ ಕೊಂಚ ಅಪಥ್ಯಮಾಡಿಸಿರುವೆನು. ನೀನೂ ಕೊಂಚ ಮಾಡಿಸು.

ವಿಲಾಸ—ಅದು ಹೇಗೆ ?

ಹರ—ನಿನಗೆ ತೋರಿಬರುವಹಾಗೆ ಮಾತು. ಶರಚ್ಚಂದ್ರನು ನನ್ನ ವಿಷಯದಲ್ಲಿ ಬಹಳವಾಗಿ ಕೋಪಿಸಿಕೊಂಡಿರುವನು.

ವಿಲಾಸಿನಿಯು ಹರಮಣಿಯ ಮಾತನ್ನು ಕೇಳಿದನಂತರ ಶರತ್ತಿನ ಕೋಣೆಯೊಳಗೆ ಪ್ರವೇಶಮಾಡಿ ನೋಡಿದಳು. ಶರ

ಚ್ಚಂದ್ರನು ಮಲಗಿ ನಿದ್ರೆಮಾಡುತಿದ್ದನು. ವಿಲಾಸಿನಿಯು ಆತನ ಹತ್ತಿರಕ್ಕೆ ಬಂದು—ಶರತ್, ಎಂದು ಮೆಲ್ಲಗೆ ಕೂಗಿದಳು.

ಶರಚ್ಚಂದ್ರನು ಎದ್ದು ಕುಳಿತುಕೊಂಡನು. ಆದರೆ ಅವನ ಬಾಯಲ್ಲಿ ಯಾವ ಮಾತೂ ಹೊರಡಲಿಲ್ಲ. ವಿಲಾಸಿನಿಯು ತಾನಾಗಿಯೇ ಮೊದಲು ಮಾತನಾಡಿಸಿದಳು.

ವಿಲಾಸಿನಿ—ನಿನ್ನ ರೋಗವು ಮತ್ತೆ ಮರಕಳಿಸಿದಂತೆ ಕೇಳುವೆನು.

ಶರತ್—ಅಹುದು.

ವಿಲಾಸಿನಿ—ಕಾರಣವೇನು ?

ಶರತ್— (ಕೋಪದಿಂದ) ಹರಮಣಿಯು ಸರ್ವನಾಶಿನಿ. ಆ ಪಿಶಾಚಿಯು ನಿನ್ನ ಕುತ್ತಿಗೆಯನ್ನು ಹಿಡಿದಿರುವಳು. ಅದನ್ನು ದೂರ ಓಡಿಸದೇಹೋದರೆ, ನಿನಗೆ ಕ್ಷೇಮವೇ ಇಲ್ಲ.

ವಿಲಾಸಿನಿ— (ವಿಸ್ಮಿತಳಾಗಿ) ಅದೇನು, ಶರಚ್ಚಂದ್ರ ? ಹರಮಣಿಯು ಮಾಡಿದುದೇನು ?

ಇದನ್ನು ಕೇಳಿ ಶರಚ್ಚಂದ್ರನು ತನಗೆ ತೋರಿದುದೆಲ್ಲವನ್ನೂ ಹೇಳಿದನು. ಇದನ್ನು ಕೇಳಿ ವಿಲಾಸಿನಿಯು—ಅನ್ಯಾಯ ! ಅನ್ಯಾಯ !! ಆಕೆಯು ದಾಸಿ. ನಮ್ಮ ಮನೆಯ ಗುಟ್ಟು ಆಕೆಗೆ ಹೇಗೆ ಗೊತ್ತಾದೀತು ? ಆಕೆಯು ತಿಳಿಯದ ವಿಷಯವನ್ನು ಗೊತ್ತಿಲ್ಲವೆಂದು ಹೇಳುವುದು ಬಿಟ್ಟು, ಬಾಯಿಗೆ ಬಂದಂತೆ ಬಗುಳುವುದಕ್ಕೆ ಅವಳಾರು ? ನಾನು ಅವಳಿಗೆ ಈಗಲೇ ತಕ್ಕ ಶಿಕ್ಷೆಯನ್ನು ಮಾಡದೇ ಬಿಡೆನು. ಏನು ಅನ್ಯಾಯ ! ವಿನೋದಿನಿಯ ವಿಷಯ ಅವಳಿಗೇತಕೆ ? ಎಂದಳು.

ಶರಚ್ಚಂದ್ರನು ಇದನ್ನು ಕೇಳಿ, ಇವರಿಬ್ಬರಲ್ಲಿ ಏನೋ

ಬಿಳಿಸಂಚಿರಬೇಕೆಂದು ತಿಳಿದವನಾಗಿ—ಹಾಗಾದರೆ ಇದತಕ್ಕ ವಿಷಯ ವೇನು ? ನೀನಾದರೂ ಹೇಳು, ಎಂದನು.

ವಿಲಾಸಿನಿ—ಯಾರುತಾನೇ ಹೇಳುವುದೇನಿದೆ ? ಹುಡುಗಿಯು ತಿಳಿಯದೇ ತಪ್ಪು ಕೆಲಸವನ್ನು ಮಾಡಿದರೆ, ಅದನ್ನು ದಾಸಿ ಯಾದವಳು ಬಹಿರಂಗ ಪಡಿಸಬಹುದೆ? ಹರಮಣಿಗೆ ಗ್ರಹಚಾರ ಕಡಮೆಯಾಗಿರುವುದು. ನಾನು ಇನ್ನುಮೇಲೆ ಆಕೆಯ ಮುಖವನ್ನು ನೋಡಕೂಡದು.

ಇದನ್ನು ಕೇಳಿ ಶರಚ್ಚಂದ್ರನು ವಿನೋದಿನಿಯಲ್ಲಿ ಗುರುತರ ವಾದ ದೋಷವಿರುವುದೆಂದು ತಿಳಿದವನಾಗಿ—ವಿಲಾಸ ! ಏನು ನಡೆದಿರುವುದು ? ಮುಚ್ಚುಮರೆ ಮಾಡದೇ ಹೇಳು, ಎಂದು ಅಂಗ ಲಾಚಿಕೊಂಡನು.

ವಿಲಾಸಿನಿ—ಏನುಹೇಳಲಿ? ಶರಚ್ಚಂದ್ರ !

ಶರತ್—ವಿನೋದಿನಿಯು ಗರ್ಭಿಣಿಯೋ ಅಲ್ಲವೆ ?

ವಿಲಾಸಿನಿ—ಶರಚ್ಚಂದ್ರ, ವಿನೋದಿನಿಯು ಇನ್ನೂ ಲೋಕ ವನ್ನರಿಯದ ಬಾಲೆ, ಯುಕ್ತಾಯುಕ್ತವನ್ನು ವಿಚಾರಮಾಡು ವಷ್ಟು ಶಕ್ತಿಯು ಅವಳಿಗಿಲ್ಲ. ನೀನು ಆ ವಿಷಯವನ್ನು ಮನ ದಲ್ಲಿ ತೆಗೆದುಕೊಳ್ಳಕೂಡದು.

ಶರತ್—ಚನ್ನಾಗಿದೆ ! ನನ್ನ ಹೆಂಡತಿಯು ಗರ್ಭಿಣಿಯೋ ಅಲ್ಲವೋ ಎಂಬುದನ್ನು ನಾನು ತಿಳಿಯುವುದು ಉಚಿತವಲ್ಲವೆ ?

ವಿಲಾಸಿನಿ—ವಿನೋದಿನಿಯು ಸಾಕ್ಷಾತ್ ನನ್ನ ತಂಗಿಯ ಲ್ಲವೆ ? ನಾನಲ್ಲವೇ ಅವಳನ್ನು ದೊಡ್ಡವಳನ್ನಾಗಿ ಮಾಡಿದವಳು ? ನನಗಾರಿರುವರು ? ಅವಳೇ ನನಗೆ ಸರ್ವಸ್ವಸ್ವರೂಪಳು. ಆದು ದರಿಂದ ಅವಳಲ್ಲಿ ಯಾವ ದೋಷವಿದ್ದರೂ, ಅದನ್ನು ನಾನು ಸಹಿಸಿಕೊಂಡಿರಬೇಕೇ ವಿನಾ ಬಹಿರಂಗ ಪಡಿಸುವುದು ಸರ್ವಥಾ

ಯೋಗ್ಯವಲ್ಲ. ನನ್ನ ಪ್ರಾಣ ಹೋಗುವುದಾದರೂ, ನಾನು ವಿನೋದಿನಿಗೆ ತೊಂದರೆಯನ್ನುಂಟು ಮಾಡಲಾರೆನು.

ಇಷ್ಟು ಮಾತು ಮುಗಿಯುವುದರೊಳಗಾಗಿ ವಿಲಾಸಿನಿಯ ಕಣ್ಣುಗಳಲ್ಲಿ ನೀರು ತುಂಬಿಕೊಂಡಿತು. ಅದನ್ನು ಕಣ್ಣಾರೆ ನೋಡಿದ ಶರಚ್ಚಂದ್ರನ ಹೃದಯದಲ್ಲಿ ಸಂದೇಹ, ಆಶ್ಚರ್ಯ, ಕೋಪ, ಭಯ, ಬಹು ಮಾತಿನಿಂದೇನು, ನವರಸಗಳೂ, ನಾನಾ ಭಾವಗಳೂ ಒಟ್ಟಾಗಿ ಸೇರಿ ಆಧಿಪತ್ಯ ಮಾಡತೊಡಗಿದುವು. ವಿನೋದಿನಿಯು ಚಾಪಲ್ಯದಿಂದ ತನ್ನ ಪಾತಿವ್ರತ್ಯವನ್ನು ಹಾಳುಮಾಡಿಕೊಂಡ ದೋಷಕ್ಕೆ ಭಾಗಿನಿಯಾಗಿರುವಳೆಂದು ಶರಚ್ಚಂದ್ರನು ತಿಳಿದು ಕಾತರನಾಗಿ ಇಂತೆಂದನು—ವಿಲಾಸಿನಿ ! ವಿನೋದಿನಿಯು ನಿನಗೆ ಎಷ್ಟರಮಟ್ಟಿಗೆ ವಿಶ್ವಾಸ ಪಾತ್ರಳೆಂದು ನಾನು ಕಾಣೆನೆ ? ಯಾವ ಸಂಬಂಧದಿಂದ ನೀವಿಬ್ಬರೂ ಬದ್ಧರಾಗಿರುವಿರೋ, ಅದೇ ಸಂಬಂಧದಿಂದ ನಿನಗೆ ನಾನು ದೂರನೆ ? ಹರಮಣಿಯು ಹೇಳಿದ ಮಾತಿನಿಂದ ನನ್ನ ಹೃದಯದಲ್ಲಿ ಸಂದೇಹ ಹುಟ್ಟಿ ಮರಣ ಸಂಕಟಕ್ಕಿಟ್ಟಿರುವುದು, ನೀನು ಆ ಸಂಕಟವನ್ನು ಹೆಚ್ಚುಮಾಡುವುದರಲ್ಲಿರುವೆಯೋ ವಿನಾ ಅದನ್ನು ಹೋಗಲಾಡಿಸುವುದಿಲ್ಲ. ಬಾಯಲ್ಲಿ ಮಾತ್ರ ವಿಶ್ವಾಸವನ್ನು ತೋರಿಸುವೆ. ನನಗೆ ರೋಗವೆಂಬುದನ್ನು ಕೇಳಿದೊಡನೆಯೇ ಇಲ್ಲಿಗೆ ಓಡಿಬಂದವಳು, ಪ್ರಕೃತ ಕಷ್ಟವನ್ನು ನಿವಾರಣೆ ಮಾಡದಿರುವುದಾದರೆ, ನಿನ್ನ ವಿಶ್ವಾಸವನ್ನು ಏನೆಂದು ಹೇಳಲಿ. ನಿನ್ನ ಸ್ವಭಾವವು ಹೀಗೆಂದು ಮೊದಲು ಗೊತ್ತಾಗಲಿಲ್ಲ. ಹೆಂಗಸರ ಹೃದಯವನ್ನು ಬಲ್ಲವರಾರು ?

ವಿಲಾಸಿನಿಯು ಉತ್ತರ ಕೊಟ್ಟಳು.—

ಶರಚ್ಚಂದ್ರ ! ನನ್ನ ಹೃದಯದಲ್ಲಿರುವುದನ್ನು ನಿನಗೆ ಹೇಗೆ ತೋರಿಸುವುದಕ್ಕಾದೀತು ? ನಾನು ನಿನ್ನನ್ನು ಎಷ್ಟರ ಮಟ್ಟಿಗೆ

ಪ್ರೀತಿಸುವೆನೆಂಬುದನ್ನು ನೀನೆಂದಿಗೂ ಕಾಣೆ. ಆ ಹಾಳು ಪ್ರೀತಿಯೇ ಈಗ ನನಗೆ ದುಃಖಕ್ಕಾಗಿರುವುದು. ನನ್ನ ತಂಗಿಯಾದ ವಿನೋದಿನಿಯನ್ನಾದರೂ ಬಂದುನೇಳಿ ದುಃಖಸಾಗರದಲ್ಲಿ ತಳ್ಳಲು ಸಾಹಸ ಮಾಡುವೆನು, ಆದರೆ ನಿನಗೆ ಕೊಂಚ ಕಷ್ಟಬಂದರೂ, ಅದನ್ನು ಮಾತ್ರ ಸಹಿಸಲಾರದವಳಾಗಿರುವೆನು. ನಿನ್ನಮುಂದೆ ಏನು ಹೇಳಿದರೆ ತಾನೇ ಪ್ರಯೋಜನವೇನು ? ನನ್ನ ವಿಷಯದಲ್ಲಿ ಜಗತ್ತು ನಿರ್ದಯ ; ನೀನೂ ನಿಷ್ಠುರ. ನೀನು——

ಹೀಗೆ ಹೇಳಿ ವಿಲಾಸಿನಿಯು ಮುಖವನ್ನು ಮುಚ್ಚಿಕೊಂಡು ಬಿಕ್ಕಿಬಿಕ್ಕಿ ಅಳತೊಡಗಿದಳು.

ಇದನ್ನು ನೋಡಿ ಶರಚ್ಚಂದ್ರನು ಮನ ಕರಗಿದವನಾಗಿ, ವಿಲಾಸಿನಿಯಂತಹ ಉದಾರಹೃದಯಳನ್ನು ನಾನು ದುಃಖಕ್ಕೀಡು ಮಾಡಿದೆನು. ನನ್ನಂತಹ ಪಾಪಿಯು ಈ ಪ್ರಪಂಚದಲ್ಲಿ ಯಾರೂ ಇಲ್ಲವೆಂದು ಯೋಚಿಸುತ್ತಾ ಮತ್ತೆ ಮಾತನಾಡಿದನು——

ವಿಲಾಸ ! ನನ್ನಮೇಲೆ ಕೋಪಮಾಡಬೇಡ. ನಿನ್ನ ಕಷ್ಟವನ್ನು ನಾನು ಕಾಣೆನೆ ? ಪ್ರೇಮಪಾತ್ರಳಾದ ತಂಗಿಯ ದೋಷವನ್ನು ಬಹಿರಂಗಮಾಡುವದಕ್ಕೆ ನಿನ್ನ ಮನಸ್ಸು ಒಡಂಬಡದೇ, ನೀನು ಶ್ರಮ ಪಡುತ್ತಿರುವುದನ್ನು ನಾನು ಕಾಣೆನೆ ? ಆದರೆ, ವಿನೋದಿನಿಯ ವಿಷಯವನ್ನು ತಿಳಿಯಬೇಕೆಂಬ ಅತ್ಯಾದರದಿಂದ ನಾನು ಮನಬಂದಂತೆ ಮಾತಾಡಿದುದುಂಟು. ಇದಕ್ಕಾಗಿ ನೀನು ಕೋಪಮಾಡಬೇಡ. ನೀನು ಕಣ್ಣೀರುಬಿಟ್ಟರೆ, ನನ್ನ ಹೃದಯವೇ ಒಡೆದು ಹೋಗುವುದು. ನೀನು ಕೊಂಚವೂ, ಭಯಪಡದೆ ನನ್ನ ಸಂಶಯವನ್ನು ದೂರಮಾಡಿ, ನನ್ನನ್ನು ಉದ್ಧಾರಮಾಡು.

ಶರಚ್ಚಂದ್ರನು ಹೀಗೆ ಹೇಳಿ ವಿಲಾಸಿನಿಯ ಕಾಲಿಗೆ

ಮೇಲೆ ಬಿದ್ದನು. ವಿಲಾಸಿನಿಯು ಶರತ್ತಿನ ರೋಗವನ್ನು ವೃದ್ಧಿ ಮಾಡುವುದಕ್ಕೆ ಇದೇ ಸರಿಯಾದ ಕಾಲವೆಂದು ತಿಳಿದು— ಶರತ್ ! ನಿನ್ನ ಸಂಶಯವು ನನಗೆ ಗೊತ್ತಾಯಿತು. ನಿನ್ನನ್ನು ಈ ಕಷ್ಟದಿಂದ ಉದ್ಧಾರ ಮಾಡಲು ಸಿದ್ಧಳಾಗಿರುವೆನು. ನೀನು ಮಾತ್ರ ವಿನೋದಿನಿಯ ದೋಷವನ್ನು ಮನಸ್ಸಿಗೆ ತೆಗದುಕೊಳ್ಳದಿದ್ದರೆ ನಾನು ಹೇಳುವೆನು, ಎನಲಾಗಿ, ಶರಚ್ಚಂದ್ರನು ಆತುರದಿಂದ—ವಿಲಾಸ ! ಅದರ ಚಿಂತೆ ನಿನಗೆ ಬೇಡ. ಸಾವಿರಾರು ತಪ್ಪುಗಳಿಂದ ವಿನೋದಿನಿಯು ಅಪರಾಧಿನಿಯಾದರೂ, ಆಕೆಯು ನನಗೆ ಆನಂದಸ್ವರೂಪಳು, ಎಂದು ಮಾತುಕೊಟ್ಟನು.

ವಿಲಾಸಿನಿ— ಹೇ ಭಗವಂತ ! ವಿನೋದಿನೀಶರಚ್ಚಂದ್ರರ ಪ್ರೇಮವು ಏಕರೀತಿಯಾಗಿರುವಂತೆ ದಯೆಪಾಲಿಸು. ಶರಚ್ಚಂದ್ರ ! ನನ್ನಿಂದೇನಾಗಬೇಕು ?

ಶರತ್—ವಿನೋದಿನಿಯು ಗರ್ಭಿಣಿಯೆ ?

ವಿಲಾಸಿನಿ—ಅಲ್ಲ.

ಶರತ್—ಮೊದಲು ನೀನು ಸುಳ್ಳನ್ನು ಹೇಳಿದುದೇತಕೆ ?

ವಿಲಾಸಿನಿ—ಆಕೆಗಾಗಿ ನೀನು ಕೊರಗುತಿದ್ದುದರಿಂದ, ನಿನ್ನ ಮನಸ್ಸನ್ನು ಬೇರೆ ಮಾರ್ಗದಲ್ಲಿ ತಿರುಗಿಸುವುದಕ್ಕಾಗಿ ನಾನು ಹಾಗ ಹೇಳಿದುದುಂಟು.

ಶರತ್—ವಿನೋದಿನಿಯು ಸ್ವಸ್ಥವಾಗಿರುವಳೆ ?

ವಿಲಾಸಿನಿ—ಇರುವಳು.

ಶರತ್—ನನ್ನ ಕಾಗದ ಆಕೆಯ ಕೈಸೇರಿತೆ ?

ವಿಲಾಸಿನಿ—ಅನೇಕ ಕಾಗದಗಳು ಸೇರಿವೆ ?

ಶರತ್—ಉತ್ತರ ಕೊಡದಿರಲು ಕಾರಣವೇನು ?

ವಿಲಾಸಿನಿ—ಅದನ್ನು ನಾನು ಹೇಗೆ ಹೇಳಲಿ ? ನಾನು ಆಕೆಗೆ

ಎಷ್ಟೋಸಲ ಹೇಳಿದೆ. ಅವಳು ಅವುವನ್ನು ಕಿವಿಯಮೇಲೆ ಹಾಕಿ ಕೊಳ್ಳಲಿಲ್ಲ. ಈಗ ಅವಳೊಂದು ಬಗೆಯಾಗಿ ಹೋಗಿರುವಳು.

ಶರತ್— (ಉನ್ಮತ್ತನಂತಾಗಿ) ವಿನೋದಿನಿ! ನೀನು ನನಗೋಸುಗ ಹುಚ್ಚಿಯಾದೆಯಾ? ಈಸಲ ನಾನು ನಿನ್ನನ್ನು ಅಗಲಿ ಇಲ್ಲಿಗೆ ಬಂದುದೇ ತಪ್ಪಾಯಿತು. ಹಾ ದೈವವೆ! ವಿನೋದಿನಿಗೆ ಒಳ್ಳೆಯ ಬುದ್ಧಿಯನ್ನು ಕೊಟ್ಟು ಕಾಪಿಡು. ನಾನು ನಿನಗೆ ನೂರಾರು ಪ್ರಣಾಮವನ್ನು ಮಾಡುವೆನು.

ವಿಲಾಸಿನಿ—(ಸ್ವಗತ) ವಿನೋದಿನಿ! ಈ ಜಗತ್ತಿನಲ್ಲಿ ನೀನೇ ಧನ್ಯಳು. ನಿನ್ನಲ್ಲಿ ನಿನ್ನ ಗಂಡನಿಗಿರುವ ಪ್ರೀತಿಯು ಅಮಿತವಾದುದು. ಆದರೆ ನಾನು ಮಾತ್ರ ಅದನ್ನು ಸಹಿಸಲಾರೆನು. ಹೇಗಾದರೂ ಮಾಡಿ, ನಿಮ್ಮಿಬ್ಬರನ್ನೂ ಅಗಲಿಸದೇ ಹೋದರೆ, ನಾನು ಹೆಂಗಸೇ ಅಲ್ಲ. (ಪ್ರಕಾಶ) ಆಕೆಯು ಹುಚ್ಚಿಯಾಗಲು ಕಾರಣ? ಆಕೆಯು ಮನೆಯ ಕೆಲಸವನ್ನು ತೃಪ್ತಿಕರವಾಗಿ ಮಾಡುವಳು; ಪೂರ್ವಾಪರ ವಿರೋಧವಿಲ್ಲದೇ ಮಾತುಕತೆಗಳನ್ನಾಡುವಳು; ಯಾವಾಗಲೂ ನಗುತನಗುತ ಆನಂದದಿಂದಿರುವಳು. ಹೀಗಿರುವಲ್ಲಿ ಅವಳು ಹುಚ್ಚಿಯೆಂದವರೆನು? ಈ ಮಾತು ಹಾಗಿರಲಿ. ಆಕೆಯ ವಿಷಯವನ್ನು ಜ್ಞಾಪಿಸಿಕೊಂಡರೆ, ನನ್ನ ಮನಸ್ಸು ವ್ಯಾಕುಲವಾಗುವುದು. ನಾನು ಇಷ್ಟು ಹೇಳಿದುದೇ ಸಾಕಾಗಿದೆ. ಮುಂದೆ ನೀನು ಪ್ರಶ್ನೆಯನ್ನು ಮಾಡಲೂಬೇಡ, ನಾನು ಹೇಳುವುದೂ ಇಲ್ಲ. ಇದಕ್ಕಿಂತಲೂ ಹೆಚ್ಚಾಗಿ ನನಗೇನೂ ಗೊತ್ತಿಲ್ಲ.

ಶರತ್—ನನ್ನಮೇಲೆ ಇಷ್ಟು ಕೋಪಬೇಡ. ನಾನು ಒಂದೆರಡು ಪ್ರಶ್ನೆಗಳನ್ನು ಕೇಳಬೇಕೆಂದಿರುವೆನು. ದಯವಿಟ್ಟು ಹೇಳು.

ವಿಲಾಸಿನಿ—ವಿನೋದಿನಿಯ ವಿಷಯವಷ್ಟೆ?

ಶರತ್—ಅಹುದು.

ವಿಲಾಸಿನಿ—ಮತ್ತೇನು ? ಶರಚ್ಚಂದ್ರ ! ನೀನು ಕೋಪ ಮಾಡಬೇಡ. ವಿನೋದಳು ಇನ್ನೂ ಹುಡುಗಿ.

ಶರತ್—ನಾನು ಖಂಡಿತವಾಗಿಯೂ ಆಕೆಯ ತಪ್ಪುಗಳನ್ನು ಲೆಕ್ಕಿಸುವುದಿಲ್ಲ. ಅದಕ್ಕಾಗಿ ನೀನೇತಕೆ ಚಿಂತಿಸುವೆ ? ನಾನು ಅಸ್ವಸ್ಥವಾಗಿದ್ದ ವಿಷಯ ಆಕೆಗೆ ತಿಳಿಯಿತೇ ಇಲ್ಲವೇ ?

ವಿಲಾಸಿನಿ—ಅದಕ್ಕೆ ಉತ್ತರಹೇಳುವೆನು. ನೀನುಮಾತ್ರ ನನ್ನ ಪ್ರಾರ್ಥನೆಯೊಂದನ್ನು ನೆರವೇರಿಸಿ ಕೊಡಬೇಕು. ನೀನು ಬುದ್ಧಿವಂತ, ನೀನು ವಿದ್ಯಾವಂತ, ನೀನು ಧೈರ್ಯಶಾಲಿ. ವಿನೋದಿನಿ ಇನ್ನೂ ಹುಡುಗಿ. ಅವಳ ತಪ್ಪೇನಿದ್ದರೂ ನೀನು ಕ್ಷಮಿಸಬೇಕಾದುದು ಧರ್ಮವಾಗಿರುವುದು. ಬಂದುದೇಳ್ ನನ್ನಮೇಲೆ ಕೋಪಮಾಡಿದರೂ ಮಾಡು ; ಅವಳಮೇಲೆ ಮಾತ್ರ ಕೋಪಮಾಡಬೇಡ ಕಂಡೆಯಾ ?

ವಿಲಾಸಿನಿಯು ಹೀಗೆ ಹೇಳಿ ಕಣ್ಣುಗಳನ್ನು ಸೆರಗಿನಿಂದ ಒರಸಿಕೊಳ್ಳಲಾರಂಭಿಸಿದಳು. ಲೋಕದಲ್ಲಿ ಹೆಂಗಸರು ತಮ್ಮ ತಮ್ಮ ಉದ್ದೇಶಗಳನ್ನು ನೆರವೇರಿಸಿಕೊಳ್ಳುವುದಕ್ಕೆ ನಾನಾವಿಧವಾದ ಉಪಾಯಗಳನ್ನು ಮಾಡುವರು. ಅವುಗಳಲ್ಲಿ ಮಾತೆತ್ತಿದರೆ ಅಳುವುದು ಮೊದಲನೆಯದು. ಇದಕ್ಕಾಗಿ ಧೀರನಾದವನು ಎದೆಗೆಡುವುದಿಲ್ಲ. ಸ್ತ್ರೀದೇವತೆಯ ಉಪಾಸಕರ ಮಾತುಹಾಗಿರಲಿ.

ಶರಚ್ಚಂದ್ರನು ಮತ್ತೆ—ವಿಲಾಸ ! ಈ ನನ್ನ ಅವಸ್ಥೆಯು ಆಕೆಗೆ ತಿಳಿಯಿತೇ ? ಎಂದನು.

ವಿಲಾಸಿನಿ—ತಿಳಿಯುವುದೇನು ? ನೀನು ರಿಜಿಸ್ಟರು ಮಾಡಿದ ಕಾಗದವನ್ನು ಅವಳು ಕೈಯಲ್ಲಿ ಹಿಡಿದುಕೊಂಡು ನನ್ನ ಹತ್ತಿರ ಬಂದು ಹೇಳಿದ್ದೇನೆಂದರೆ—ಅಕ್ಕ ! ಕಾಗದವು ಈ ರೀತಿಯಾಗಿ ಬಂದಿರುವುದು. ಈಗ ಏನುಮಾಡಲಾದೀತು ? ವಿದ್ಯಾನಗರಕ್ಕೆ ಇದ್ದ

ಕ್ಷಿಪ್ರವಾಗಿ ಮೋಸಹೋಗುವದಕ್ಕೆ ಹೇಗೆ ಆಗುತ್ತದೆ ? ನನಗೂ ಸ್ಮೃತಿಯಲ್ಲಿ ಚೆನ್ನಾಗಿಯೇ ಇಲ್ಲ. ರೋಗ ಬರುವುದು ಮನುಷ್ಯನ ಸ್ವಭಾವ. ಅದಕ್ಕಾಗಿ ನಾನು ಹೋಗಿ ಮಾಡುತ್ತೇನಲ್ಲವೇ ಏನಿದೆ ?

ನಾನು ಈ ಮಾತನ್ನು ಕೇಳಿ ಬೆರಗಾಗಿ— ಮಗು ! ಹಾಗಾದರೆ ನಾನೇ ಹೋಗಿ ಬರುವೆನು, ಎಂದು ಹೇಳಿ ಪರಮಾಣಿಯನ್ನು ಕರೆದುಕೊಂಡು ಇಲ್ಲಿಗೆ ಬಂದೆನು.

ಶರತ್—ನೀನು ಇಲ್ಲಿಗೆ ಬಂದುದ್ದೇಕೆ, ಅಕ್ಕನು ನಿನಗೇನಾದರೂ ಕಾಗದ ಬರೆದಳೇ ?

ವಿಲಾಸಿನಿ—ಎರಡುಮೂರು ಕಾಗದಗಳನ್ನು ಬರೆದಿದ್ದಾಳೆ.

ಶರತ್—ಎಲ್ಲಿ ?

ವಿಲಾಸಿನಿ—ಕಾಗದಗಳು ಎಲ್ಲಿಯೋ ಬಿದ್ದಿರುತ್ತವೆ. ಹುಡುಕಿ ತರುವೆನು.

ಹೀಗೆ ಹೇಳಿ ಆಕೆಯು ಬೇರೆಯ ಕೋಣೆಗೆ ಹೋಗಿ ಬಂದು ಕಾಗದವನ್ನು ತಂದು—ಒಂದೇ ಕಾಗದ ಮಾತ್ರ ಸಿಕ್ಕಿತು, ಎಂದು ಅದನ್ನು ತೋರಿಸಿದಳು.

ಶರತ್—ಇಲ್ಲಿ ಕೊಡು.

ವಿಲಾಸಿನಿ—ನೀನು ಓದತಕ್ಕದಲ್ಲ.

ಶರತ್—ಚಿಂತೆಯಿಲ್ಲ.

ವಿಲಾಸಿನಿ—ನಾನು ಕೊಡುವದಿಲ್ಲ.

ಶರಚ್ಚಂದ್ರನು ಆ ಕಾಗದವನ್ನು ಬಲಾತ್ಕಾರದಿಂದ ಕಿತ್ತುಕೊಂಡು ಓದಿದನು:—

ಅಕ್ಕ ! ನನ್ನ ಯಜಮಾನರ ವಿಷಯವಾಗಿ ಇನ್ನು ಹೆಚ್ಚು ಸಂಗತಿಯನ್ನು ಬರೆಯುವೆನು. ಅವರು ಕೇಳಿದರೆ, ನಾನು ಸುಖಿ

ವಾಗಿರುವೆನೆಂದು ಮಾತ್ರ ಹೇಳಬೇಡ. ನನ್ನ ಸಂತೋಷವೆಂಬ ಅಮೃತದಲ್ಲಿ ಗರಳ (ವಿಷ) ವನ್ನು ಮಾತ್ರ ಸುರಿಯಬೇಡ. ನೀನು ಯಾವಾಗ ಬರುವೆ ?

ವಿನೋದಿನಿ.

ಶರಚ್ಚಂದ್ರನು ಕಾಗದವನ್ನು ಓದಿ ಕೆಳಗೆ ಬಿಸುಟು,— ವಿಲಾಸ! ಈಗ ನನ್ನ ಸಂಶಯವು ಮಾಯವಾಯಿತು. ಲೋಕದಲ್ಲಿ ಆರಾರಲ್ಲಿ ಆವಾವ ಪಾಪವು ಅಡಗಿರುವುದೋ ಯಾರು ಬಲ್ಲರು ? ಎಂದು ಹೇಳಿ ಸುಮ್ಮನಾದನು.

ವಿಲಾಸಿನಿಯು ತನ್ನ ಕುತಂತ್ರವೆಂಬ ಬೀಜವು ಅಂಕುರಿಸಿತೆಂದು ಸಂತೋಷಪಟ್ಟವಳಾಗಿ ತನ್ನ ಕೋಣೆಗೆ ಹೊರಟುಹೋದಳು.

---

## ಎಂಟನೆಯ ಸಂಧಿ.

### ವಿಕಾರಾಂತರ.

ವಿನೋದಿನಿಯು ಈ ಸಮಯದಲ್ಲಿ ಯಾವರೀತಿಯಲ್ಲಿರುವಳೆಂಬುದನ್ನು ಇಲ್ಲಿ ತಿಳಿಯಬೇಕಾದುದು ಯುಕ್ತವಾಗಿರುವುದು. ಬಹಳ ದಿನಗಳಿಂದಲೂ ಆಕೆಯ ವಿಷಯವನ್ನೇ ತಿಳಿಸದ ನಾವು ನಮ್ಮ ಪ್ರಿಯ ಪಾಠಕರ ಕ್ಷಮೆಯನ್ನು ಬೇಡುವೆವು.

ರಂಗಪುರದಲ್ಲಿ ಅದೇಮನೆಯಲ್ಲಿ ವಿನೋದಿನಿಯು ಒಂದು ಕೋಣೆಯಲ್ಲಿ ಮಲಗಿಕೊಂಡಿರುವಳು. ಕೋಣೆಯ ಬಾಗಿಲು ತೆರೆಯಲ್ಪಟ್ಟಿದ್ದಿತು. ಗಾಳಿಯು ಬಲವಾಗಿ ಬೀಸಿದಾಗಲೆಲ್ಲ ಕಿಟಕಿಯು ಪಡಬಡ ಶಬ್ದಮಾಡುತ್ತಿರುವುದು. ವಿನೋದಿನಿಗೆ ಇದರ ಯೋಗಕ್ಷೇಮವೇ ಬೇಕಾಗಿರಲಿಲ್ಲ. ವಿನೋದಿನಿಯು ಕೇವಲ ವಿಷಣ್ಣಳಾಗಿ ದುರಂತವಾದ ಚಿಂತೆಯಿಂದ ಥ-ಥರ ನಡುಗುತ್ತಿದ್ದಳು. ನಿತ್ಯರೋಗಿ

ಯಂತೆ ಆಕೆಯು ಬಹಳ ದುರ್ಬಲಳಾಗಿದ್ದಳು. ಆಕೆಯ ದೇಹದಲ್ಲಿ ಲಾವಣ್ಯವಿಲ್ಲ ; ಅಲಂಕಾರಗಳಿಲ್ಲ. ಆಗಾಗ ಆಕೆಯ ಕಣ್ಣುಗಳಿಂದ ಬಂದೆರಡು ತೊಟ್ಟು ನೀರು ಕೆಳಗೆ ಜಾರಿಬೀಳುತ್ತಿದ್ದಿತು. ಬಹು ಕಾಲದ ವರೆಗೂ ವಿನೋದಿನಿಯು ಈ ರೀತಿಯಲ್ಲಿದ್ದು ಬಳಿಕ ತನ್ನಷ್ಟಕ್ಕೆ ತಾನೇ—ಹೇ ಜಗದೀಶ ! ನಿನ್ನ ಮನದಲ್ಲಿ ಈ ಇಷ್ಟವು ಇದ್ದಿತೆ ? ಎಂದು ನಿಟ್ಟುಸಿರನ್ನು ಬಿಟ್ಟು ಮನೆಗೆ ಸೇರಿದ ಉದ್ಯಾನದ ಕಡೆ ನೋಡಲಾರಂಭಿಸಿದಳು.

ಕೊಳದ ವಕ್ಷದಮೇಲೆ ಶುಭ್ರವಾದ ಹಂಸಮಿಥುನವು ಆನಂದ ದಿಂದ ತೇಲಿಹೋಗುತ್ತಿದ್ದಿತು. ಕಪಟತಾಪಸನಂತೆ ಬಕಪಕ್ಷಿಯು ದಡದಲ್ಲಿ ನಿಂತು ಮೀನುಗಳನ್ನು ಹಿಡಿಯುವುದಕ್ಕೆ ಸಮಯವನ್ನು ನಿರೀಕ್ಷಿಸುತ್ತಿತ್ತು. ಒಂದು ಪಕ್ಷಿಯು ಗಿಡದಿಂದ ಹಾರಿಬಂದು ಒಂದು ಮೀನನ್ನು ಕಚ್ಚಿಕೊಂಡು ಹಾರಿಹೋಯಿತು. ಸರೋವರದ ಸುತ್ತಲೂ ಬೆಳೆದಿದ್ದ ಗಿಡಗಳಲ್ಲಿ ಕೆಲವು ಹೂಗಳು ಅರಳುವುದರಲ್ಲಿದ್ದುವು; ಕೆಲವು ಅರಳಿದ್ದುವು; ಕೆಲವು ಅರಳಿ ಕೆಳಗೆ ಬೀಳುತ್ತಿದ್ದುವು. ಅಲ್ಲಲ್ಲಿದ್ದ ಲತಾಮಂಟಪಗಳಲ್ಲಿ ವಾಯುದೇವನು ಸುಯ್ ಎಂದು ವಿಹರಿಸುತ್ತಿದ್ದನು. ಆ ಸಮಯದಲ್ಲಿ ಒಂದು ಕೋಗಿಲೆಯು ಅಲ್ಲಿಗೆ ಬಂದು ಪಿವ್ರೂ ಪಿವ್ರೂ ಎಂದು ಕೂಗಿ ಲತೆಯ ಮೇಲೆ ಕುಳಿತುಕೊಂಡಿತು. ಬಳಿಕ ಮತ್ತೊಂದು ಕೋಗಿಲೆಯು ಅಲ್ಲಿಗೆ ಬಂದು ಕುಹೂಕುಹೂ ಎಂದು ಕೂಗಿಕೊಳ್ಳುತ್ತಾ ಮೊದಲನೆಯ ಕೋಗಿಲೆಯ ಹತ್ತಿರ ಕುಳಿತುಕೊಳ್ಳಲು ಯತ್ನ ಮಾಡುತ್ತಿದ್ದಿತು. ಆದರೆ ಅಲ್ಲಿ ಎರಡಕ್ಕೂ ಸ್ಥಳವಿರಲಿಲ್ಲ. ಎರಡನೆಯ ಕೋಗಿಲೆಯ ಪರಿಶ್ರಮವನ್ನು ನೋಡಿ ಮೊದಲನೆಯದು ಕನಿಕರದಿಂದ ಅದಕ್ಕೆ ಸ್ಥಳವನ್ನು ಕೊಡುವುದಕ್ಕಾಗಿ ಬೇರೆಯ ಕಡೆಗೆ ಹಾರಿಹೋಯಿತು. ಅನಂತರ ಎರಡನೆಯ ಕೋಗಿಲೆಯೂ

ಅದರ ಹಿಂದೆಯೇ ಹೊರಟುಹೋಯಿತು. ಮಹಾಶಯ ! ಪಕ್ಷಿಭಾಷೆಯನ್ನು ನೀವು ತಿಳಿದಿರುವುದಾದರೆ ಪಿಪ್ರೊಪಿಪ್ರೊ, ಕುಹೂಕುಹೂ ಶಬ್ದಗಳಿಗೆ ಅರ್ಥವೇನೆಂಬುದನ್ನು ದಯೆಯಿಟ್ಟು ನನ್ನ ಗೊಂದಲ ತಿಳಿಸಿರಿ. ನಾನೂ ನಿಮ್ಮಿಂದಲೇ ಅರ್ಥವನ್ನು ತಿಳಿದು ಸಂತೋಷಪಡುವೆನು.

ವಿನೋದಿನಿಯು ಇದೆಲ್ಲವನ್ನೂ ನೋಡಿದಳು. ಯಾತರಿಂದಲೂ ಮನೋವ್ಯಥೆಯು ನಿವಾರಣೆಯಾಗದಿರಲು, ಆಕೆಯು ಪೆಟ್ಟಿಗೆಯ ಮೇಲಿದ್ದ ಕಾಗದವನ್ನು ಕೈಯಲ್ಲಿ ತೆಗೆದು ಓದಿದಳು.

ಪ್ರಿಯಭಗಿನಿ ! ನೀನು ಆಗಾಗ ಬರೆದ ಕಾಗದಗಳೆಲ್ಲವೂ ಬಂದು ಸೇರಿ ಸಕಲವೂ ಅಭಿಪ್ರಾಯವಾಯಿತು. ಇಲ್ಲಿನ ಸ್ಥಿತಿಯು ಬಹಳ ಭಯಂಕರವಾಗಿರುವುದು. ವಿನೋದ ! ಯೌವನದಲ್ಲಿ ಗಂಡಸಾದವನಿಗೆ ಯುಕ್ತಾಯುಕ್ತ ವಿವೇಕವೇ ಲುಪ್ತವಾಗಿ ಹೋಗುವುದು. ಅವಿವೇಕಿಯಾದ ಶರಚ್ಚಂದ್ರನನ್ನು ಸರಿಯಾದ ಮಾರ್ಗದಲ್ಲಿ ತಿರುಗಿಸಬೇಕೆಂದು ನಾನು ಮಿತಿಮೀರಿ ಯತ್ನಮಾಡಿ ನೋಡಿದೆನು. ಪತನಾಭಿಮುಖನಾದ ಗಂಡಸು ಹೆಂಗಸರ ಮಾತಿಗೆ ಬಗ್ಗುವನೆಂಬುದೇನು ? ಆತನ ಪ್ರಕೃತ ವೃತ್ತಾಂತವನ್ನು ನಿನಗೆ ತಿಳಿಸುವೆನು, ಕೇಳು. ಶರಚ್ಚಂದ್ರನು ಈಗ ವಾರನಾರಿಯರ ದಾಸಾನುದಾಸನಾಗಿ ಅವರ ಮನೆಯಲ್ಲಿಯೇ ಭೋಜನಾದಿಗಳನ್ನು ಮಾಡುವನು. ಅಪೇಯಪಾನ, ಅಭಕ್ಷ್ಯಭಕ್ಷಣ, ಅವನಿಗೆ ಈಗ ಸಾಮಾನ್ಯವಾಗಿ ಹೋಗಿರುವುದು. ಇದನ್ನು ಯಾರುತಾನೇ ನೋಡಿ ಸಹಿಸಬಲ್ಲರು ? ಇದೂ ಅಲ್ಲದೆ, ನಾನು ಕೇಳಿದ್ದರಲ್ಲಿ ಆತನು ಈಗ ಒಬ್ಬ ವೇಶ್ಯೆಯ ಕನ್ಯೆಯನ್ನೇ ವಿವಾಹ ಮಾಡಿಕೊಳ್ಳಬೇಕೆಂದಿರುವನಂತೆ. ಅದಕ್ಕಾಗಿ ಬೇಕುಬೇಕಾದ ಸನ್ನಾಹವು ನಡೆಯುತ್ತಿರುವುದು. ವನಮಾಲೆಯು

ಯಾರೆಂಬುದು ನನಗೆ ಗೊತ್ತಾಯಿತೆಂದರೆ, ನಾನೇನು ಮಾಡು ವೆನೋ ನೋಡು ? ಇದಕ್ಕಾಗಿ ನೀನು ಕೊರಗಬೇಡ. ಇದು ತಾನೇ ಎಷ್ಟುದಿವಸ ನಡೆಯುವುದು, ನೋಡೋಣ. ಇದಕ್ಕಾಗಿ ನಾವು ಆತುರಪಟ್ಟು ಕೆಲಸಮಾಡಿದರೆ ನಮ್ಮ ಪ್ರಯತ್ನ ವೆಲ್ಲವೂ ಹಾಳಾಗಿ ಹೋಗುವುವು. ನೀನು ಬರೆದ ಕಾಗದವನ್ನು ನಿನ್ನ ಗಂಡನಿಗೆ ತೋರಿಸಿದೆನು. ಆದರೆ ತಾನೇ ಏನು ? ನಾನು ಇಷ್ಟರ ಲ್ಲಿಯೇ ಅಲ್ಲಿಗೆ ಬರುವುದರಲ್ಲಿರುವೆನು. ಆಗ ಸಾಧ್ಯವಾದರೆ ನಿನ್ನ ಗಂಡನನ್ನೂ ಜತೆಯಲ್ಲಿಯೇ ಕರೆದುಕೊಂಡು ಬರುವೆನು. ನೀನು ಧೈರ್ಯವಾಗಿರು.

ವಿಲಾಸಿನಿ.

ವಿನೋದಿನಿಯು ಕಾಗದವನ್ನು ಓದಿ ಬಹಳಹೊತ್ತು ಕಂಬನಿ ಗರೆಯುತ್ತಾ ಯೋಚಿಸತೊಡಗಿದಳು:—ಆಕೆಯೇ ಧನ್ಯಳು. ಆಕೆಯೇ ಪುಣ್ಯವಂತೆ. ಆಕೆಯ ಜನ್ಮವೇ ಸಾರ್ಥಕವಾದುದು. ಏತಕೆಂದರೆ—ಆಕೆಯೇ ಶರಚ್ಚಂದ್ರನ ಅಕ್ಷಯವಾದ ಪ್ರೀತಿಗೆ ಏಕಮಾತ್ರಾಧಿಕಾರಿಣಿ ಯಾಗಿರುವಳು. ನಾನಾದರೋ ಮಂದ ಭಾಗ್ಯೆ. ನನ್ನಲ್ಲಿಯೂ ಅಂತಹ ಗುಣಗಳಿದ್ದಿದ್ದರೆ, ನಾನು ಆತನ ಹೃದಯ ರಾಜ್ಯದಲ್ಲಿ ಆಧಿಪತ್ಯ ಮಾಡುತಿದ್ದೆನು. ಪ್ರಾಣೇಶ್ವರ! ಪ್ರಕೃತ ಸಂದರ್ಭದಲ್ಲಿ ನೀನು ಸುಖವಾಗಿರುವೆ ? ಪಾಪವಾಗಲಿ, ತಾಪವಾಗಲಿ, ನೀನುಮಾತ್ರ ಸುಖವಾಗಿಬಾಳು. ನಿನ್ನ ಸುಖವು ಅವಿಚ್ಛಿನ್ನವಾಗಿರಲೆಂದು ನಾನು ನಿತ್ಯವೂ ದೇವರಲ್ಲಿ ಪ್ರಾರ್ಥಿಸು ತ್ತಿರುವೆನು. ಆದರೆ ನನ್ನ ಯಾತನೆಯನ್ನು ಮಾತ್ರ ನಾನು ಸಹಿಸ ಲಾರೆ. ಯಾವರೀತಿಯಲ್ಲಿ ನಾನು ಇದನ್ನು ನಿನಗೆ ತಿಳಿಯಪಡಿ ಸಲಿ ? ನಾನು ಸ್ವರ್ಗದಿಂದ ನರಕಕ್ಕೆ ಜಾರಿಬಿದ್ದು ಮತ್ತೆ ಸುಖ ವನ್ನು ಬಯಸುವೆನಲ್ಲ ! ಅಥವಾ ನನಗೆ ಸುಖದಿಂದಾಗುವುದೇನು!

ಶರಚ್ಚಂದ್ರ ! ನೀನು ಸುಖವಾಗಿರುವುದನ್ನು ಕೇಳಿಯಾದರೂ ನಾನು ಸಾಯಲೆಣಿಸಿರುವೆನು. ಇದಕ್ಕಿಂತಲೂ ಸುಖ ಮರಣವು ಬೇರೊಂದೇನಿರುವುದು ? ನಾನು ಸಾಯುವುದೇನೋ ನಿಜ. ಆದರೆ, ಪ್ರಾಣಕಾಂತ ! ಒಂದುಸಲವಾದರೂ ನಿನ್ನ ಚರಣ ದರ್ಶನವನ್ನು ಮಾಡದೇ ನಾನು ಸಾಯಲಾರೆನು.

ವಿನೋದಿನಿಯು ಈ ಯವಸ್ಥೆಯಲ್ಲಿರುವಾಗ, ದಾಸಿಯೊಬ್ಬಳು ಬಂದು—ಉಪಾಧ್ಯಾಯರು ಬಂದಿರುವರು, ಎಂದು ಹೇಳಲು, ವಿನೋದಿನಿಯು—ಅವರನ್ನು ಇಲ್ಲಿಗೆ ಕರೆದುಕೊಂಡುಬಾ, ಎಂದು ಹೇಳಿದಳು.

ಇಂದಿರೇಶ ಮಹಾಶಯನು ಆಜ್ಞೆಯ ಇಷ್ಟದಂತೆ ಕೋಣೆಯಲ್ಲಿ ಪ್ರವೇಶಮಾಡಿ ವಿನೋದಿನಿಯ ಭಾವವನ್ನು ನೋಡಿ ಚಕಿತನಾಗಿ—ವಿನೋದ ! ಇದೇತಕೆ ಹೀಗಿರುವೆ ? ಎಂದು ಕೇಳಿದನು.

ವಿನೋದಿನಿ— (ಉತ್ತರವಿಲ್ಲ)

ಇಂದಿರೇಶ—ಹೀಗೆ ಅಳಲು ಕಾರಣವೇನಮ್ಮ ? ನಿನಗೆ ಬಂದಿರುವ ಕಷ್ಟವೇನು ? ನಿನ್ನ ಯಜಮಾನನು ಸುಖವಾಗಿರುವನಷ್ಟೆ?

ವಿನೋದಿನಿಯು ಯಜಮಾನನೆಂಬ ಮಾತನ್ನು ಕೇಳಿ ಮತ್ತಷ್ಟು ಅಳತೊಡಗಿದಳು.

ಇಂದಿರೇಶ—ನಿನ್ನ ವ್ಯಸನವನ್ನು ಹೆಚ್ಚಿಸುವುದಕ್ಕಾಗಿ ನಾನು ಇಲ್ಲಿಗೆ ಬಂದಂತಿವೆ. ಇಲ್ಲಿನವರೆಗೂ ನಿನ್ನ ವ್ಯಸನದ ಸಮಾಚಾರವೇ ನನಗೆ ಗೊತ್ತಿಲ್ಲ. ನಿನ್ನ ಸಂಕಟವೇನೆಂಬುದನ್ನು ತಿಳಿಸಬಹುದಾದರೆ ತಿಳಿಸು.

ಇದನ್ನು ಕೇಳಿ ವಿನೋದಿನಿಯು, ನಿಟ್ಟುಸಿರಿಟ್ಟು ಬರೆವಕಾಗದ

ಗಳೆಲ್ಲವನ್ನೂ ಅವನ ಕೈಗೆ ಕೊಟ್ಟು ಮುಖವನ್ನು ಮುಚ್ಚಿಕೊಂಡು ಅಳಲುಪಕ್ರಮಿಸಿದಳು. ಇಂದಿರೇಶನು ಕಾಗದಗಳನ್ನು ಓದಿ,—ವಿಲಾಸಿನಿಯು ಬರೆದಿರುವುದೆಲ್ಲವೂ ನಂಬುವುದಕ್ಕಾಗುವುದಿಲ್ಲ, ಎಂದನು.

ವಿನೋದಿನಿ—(ಗದ್ಗದಸ್ವರದಿಂದ) ಹಾಗಾದರೆ ಅವರು ಒಂದು ಕಾಗದವನ್ನೂ ಬರೆಯಲಿಲ್ಲವೇತಕೆ ?

ಇಂದಿರೇಶ— ಈಸಲ ಅವರ ಕಾಗದಗಳಾವುವೂ ನಿನಗೆ ತಲುಪಲಿಲ್ಲವೆ ?

ವಿನೋದಿನಿ—ಇಲ್ಲ. ನನ್ನ ಅಕ್ಕನೊಡನೆಯೂ ಅವರು ನನ್ನ ವಿಷಯವಾಗಿ ಒಂದು ಮಾತನ್ನೂ ಆಡಲಿಲ್ಲವಂತೆ.

ಇಂದಿರೇಶ—ಇದರ ಮರ್ಮವನ್ನು ನಾನು ಪರೀಕ್ಷಿಸಿದಲ್ಲದೇ ಸಿದ್ಧಾಂತಮಾಡಲಾಗುವುದಿಲ್ಲ.

ವಿನೋದಿನಿ—ಇದು ಗೋಪ್ಯವಾದ ವಿಷಯ. ಇತರರಿಗೆ ತಿಳಿಸುವುದು ಗೌರವವಲ್ಲ. ತಾವು ನನಗೆ ತಂದೆಯ ಸಮಾನರಾಗಿರುವುದರಿಂದ, ನಾನು ತಿಳಿಸಿದೆನು. ತಾವು ದಯವಿಟ್ಟು ಮುಂದೆ ನನ್ನ ಪರಿಣಾಮವೇನೆಂಬುದನ್ನು ತಿಳಿಸಬೇಕು.

ವಿನೋದಿನಿಯು ಹೀಗೆ ಹೇಳುತ ಹೇಳುತ ಗುರುಮಹಾಶಯನ ಕಾಲುಗಳ ಮೇಲೆ ಬಿದ್ದಳು. ಇಂದಿರೇಶನು ಆಕೆಯನ್ನು ಹಿಡಿದೆತ್ತಿ—ಮಗು, ನೀನು ಯೋಚಿಸಬೇಡ. ನಾನು ಇದರ ತತ್ತ್ವವನ್ನು ಕಂಡು ಹಿಡಿಯುವೆನು. ಇದರಲ್ಲಿ ವಿಲಾಸಿನಿಯ ದುರಭಿಸಂಧಿಯೇನೋ ಇರಬೇಕೆಂದು ತೋರುವುದು. ನಾನು ಇವೆಲ್ಲವನ್ನೂ ಆದ್ಯೋಪಾಂತವಾಗಿ ಪರಿಶೀಲಿಸಿ ಕಾರ್ಯವು ಸುಖವಾಗಿ ಪರಿಣಮಿಸುವಂತೆ ಮಾಡುವೆನು. ಇದಕ್ಕಾಗಿ ನೀನು ಇಷ್ಟು ವ್ಯಸನಪಡಬಹುದೇ? ಎಂದು ಹೇಳಿ ಹೊರಟುಹೋದನು. ವಿನೋದಿನಿಯು ಮೌನವಲಿಸಾತೆಯೇ ವ್ಯಸನಪಡುತ್ತಾ ಕುಳಿತುಬಿಟ್ಟಳು.

# ಒಂಭತ್ತನೆಯ ಸಂಧಿ.

## ಬಹುಮಾತ.

ವಿದ್ಯಾಸಗರದಲ್ಲಿ ಒಂದು ಕೋಣೆಯಲ್ಲಿ ಶರಚ್ಚಂದ್ರ ಮತ್ತು ವಿಲಾಸಿನೀ ಹರಮುಣಿಯರು ಕುಳಿತುಕೊಂಡು ಮಾತನಾಡುತ್ತಿರುವರು. ಅವಾವುವೋ ಮಾತುಗಳು ನಡೆದಮೇಲೆ ಶರಚ್ಚಂದ್ರನು— ವಿಲಾಸ! ನಾನು ಈ ರೋಗದಿಂದ ಗತಿಸಿಹೋಗಿದ್ದರೆ ಚೆನ್ನಾಗಿರುತಿದ್ದಿತು, ಎಂದನು.

ವಿಲಾಸಿನಿ—ಹೀಗೆ ಕೊರಗುವುದರಿಂದ ಮನುಷ್ಯನು ಬಹಳ ಕಾಲ ಬದುಕಿದಂತೆಯೋ!

ಶರತ್—ಬದುಕಿ ಪ್ರಯೋಜನ?

ವಿಲಾಸಿನಿ—ವಿನೋದಳ ವಿಷಯವಾಗಿ ವ್ಯಸನಪಡುವುದಿಲ್ಲವೆಂದು ಹೇಳಿಯೂ, ವ್ಯಸನಪಡುವೆಯಲ್ಲ? ಇದು ಯಾರು ಮಾಡುವ ಕೆಲಸ?

ಶರತ್—ನಾನು ಅವಳ ದೋಷವನ್ನು ಕುರಿತು ವ್ಯಸನಪಡುವುದಿಲ್ಲ. ನನಗ ಇನ್ನು ಮೇಲೆ ಸುಖವೆಂದರೇನು? ನಾನು ಯಾರಿಗಾಗಿ ಬದುಕಿರಬೇಕು? ನಾನು ಯಾರಿಗಾಗಿ ಈ ಶ್ರಮವನ್ನು ಅನುಭವಿಸಬೇಕು?

ವಿಲಾಸಿನಿ—ಒಬ್ಬ ಹುಡುಗಿಗಾಗಿ ನೀನು ಇಷ್ಟು ವ್ಯಸನಪಡಬಹುದೇ? ಹೆಂಡತಿಯು ಕೆಟ್ಟು ಹೋದಳೆಂದು ಗಂಡನು ಆತ್ಮಹತ್ಯೆಯನ್ನು ಮಾಡಿಕೊಳ್ಳುವುದಾದರೆ ಪ್ರಪಂಚವುಳಿದೀತೆ? ಶರಚ್ಚಂದ್ರ! ನಿನಗಿದು ತಕ್ಕದಲ್ಲ, ಕೇಳು.

ಶ್ಲೋ॥ ಯಥಾಕಾಷ್ಠಂಚ ಕಾಷ್ಠಂಚ । ಸಮೇಯಾತಾಂ ಮಹೋದಧೌ॥
ಸಮೇತ್ಯಚ ವ್ಯಪೇಯಾತಾಂ । ತದ್ವದ್ಭೂತ ಸಮಾಗಮಃ ॥

ಒಂದು ಜಲಾಶಯದಲ್ಲಿ ಬೇರೆಬೇರೆ ಕಡೆಗಳಲ್ಲಿ ತೇಲುತ್ತಿದ್ದ ಮರದ ತುಂಡುಗಳು ವಾಯುವಿನ ಪರಿಚಲನೆಯಿಂದ ಕೆಲವುಕಾಲ ಏಕತ್ರ ಸೇರುತಲೂ ಮತ್ತೆ ದೂರದೂರ ಸರಿದು ಹೋಗುತಲೂ ಇರುವುವು. ಇದರಂತೆಯೇ ಪ್ರಾಣಿಗಳ ಸಂಯೋಗ ವಿಯೋಗಗಳೂ ಎಂದು ತಿಳಿಯಬೇಕು.

ಈ ರೀತಿಯಾಗಿ ಹೇಳುವ ತತ್ತ್ವಜ್ಞಾನಿಗಳ ಆಶಯವನ್ನು ನೀನು ತಿಳಿಯದಮೇಲೆ ಬದುಕಿ ಫಲವೇನು? ಪ್ರಕೃತ ನಾನು ನಿನ್ನನ್ನು ಪ್ರಾರ್ಥಿಸುವುದೇನೆಂದರೆ—ನೀನು ಮಾತ್ರ ವ್ಯಸನವನ್ನು ಹಚ್ಚಿಕೊಳ್ಳಬೇಡ. ಆಕೆಯು ಹೋದರೆ ಹೋಗಲಿ; ಆಕೆಗಿಂತಲೂ ಅಧಿಕವಾಗಿ ನಿನ್ನನ್ನು ಪ್ರೀತಿಸುವ ವ್ಯಕ್ತಿಯು ನಿನ್ನ ದಾಸಿಯಾಗಿರುವಾಗ ನಿನಗೆ ಸುಖಕ್ಕೇನು ಕಡಮೆ? ಆ ದಾಸಿಯು ನಿನಗಾಗಿ ಬಹಳ ಸಂಕಟಪಡುತ್ತಿರುವಳು. ಆಕೆಯನ್ನು ಮಾತ್ರ ಕೈಬಿಡಬೇಡ.

ಹೀಗೆ ಹೇಳೆ ವಿಲಾಸಿನಿಯು ಉಸ್ ಎಂದು ಭಯಂಕರವಾದ ನಿಟ್ಟುಸಿರನ್ನು ಬಿಟ್ಟಳು. ಶರಚ್ಚಂದ್ರನು ಇದನ್ನು ನೋಡಿ - ವಿಲಾಸ, ನೀನು ಇದಕ್ಕಾಗಿ ಯೋಚಿಸದಿರು. ಆವುದರಿಂದ ನಿನಗೆ ಸುಖ ಉಂಟೆಂದು ತಿಳಿದಿರುವೆಯೋ, ಅದನ್ನು ನಿನಗೆ ನಾನು ಸಂಪಾದಿಸಿ ಕೊಡುವೆನು. ನಿನಗೆ ಕಷ್ಟವಾದುದು ನನಗೂ ಕಷ್ಟವೆ, ಎಂದನು.

ವಿಲಾಸಿನಿಯು ಇದನ್ನು ಕೇಳೆ ಕೊಂಚಮಟ್ಟಿಗೆ ಶಾಂತಳಾಗಿ— ಶರತ್? ನಾನು ನಾಳೆಯೇ ಊರಿಗೆ ಹೋಗಬೇಕೆಂದಿರುವೆನು. ನೀನು ಯಾವಾಗ ಬರುವೆ? ಎಂದು ಕೇಳಿದಳು.

ಶರತ್—ನಾನು ಮನೆಗೆ? ಈ ಜನ್ಮದಲ್ಲಿಲ್ಲ.

ಇದನ್ನು ಕೇಳೆ ವಿಲಾಸಿನಿಯು ನಗುತನಗುತ—ಇದೇನು ಶರಚ್ಚಂದ್ರ? ನನಗೆ ಇಷ್ಟವಾದುದನ್ನು ನರಿಪಡಿಸಿ ಕೊಡುವೆನೆಂದು ನೀನು ಈಗತಾನೇ ಹೇಳಿ, ಅಷ್ಟರಲ್ಲಿಯೇ ಈ ಮಾತನ್ನಾಡುವೆ?

ನಿನ್ನನ್ನು ನೋಡದೇ ಇರುವುದರಿಂದ ನನಗುಂಟಾಗುವ ಕಷ್ಟವು ಅಷ್ಟಿಷ್ಟಲ್ಲ. ಶರಚ್ಚಂದ್ರ! ಇಷ್ಟಾದರೂ ನನ್ನ ಕಷ್ಟವೇನೆಂಬು ದನ್ನು ನೀನಿನ್ನೂ ತಿಳಿಯಲಿಲ್ಲವೆಂದು ತೋರುವುದು, ಎಂದು ಹೇಳಿ ನಾಚಿಕೆಯಿಂದ ತಲೆಯನ್ನು ಬಗ್ಗಿಸಿದಳು.

ಶರತ್ತು ಬಹಳ ಹೊತ್ತು ಯೋಚಿಸಿ—ಹಾಗೂ ಆಗಲಿ. ನಾನು ಮನೆಗೂ ಬರುವೆನು. ಆದರೆ ಈಗ ಬರಲಾರೆ. ವಿನೋದಿ ನಿಯ ಚರಿತ್ರೆಯು ಹೇಗೆ ಪರಿಣಮಿಸುವುದೆಂದು ನಾನು ಕಣ್ಣಾರೆ ನೋಡಿ ಬಳಿಕ ನಾನು ಅಲ್ಲಿಗೆ ಬರುವೆನು, ಎಂದನು.

ವಿಲಾಸಿನಿ—ಸರಿಸರಿ, ಹಾಗಾದರೆ ಹೊರಡಲು ನನಗೆ ಏನಪ್ಪಣೆ?

ಹೀಗೆ ಹೇಳುತ್ತಿರುವಷ್ಟರಲ್ಲಿಯೇ, ವ್ಯಸನವು ಅತ್ಯುತ್ಕಟ ವಾಗಿ, ಆಕೆಯು ಗಳಗಳ ಅತ್ತುಬಿಟ್ಟಳು. ಸ್ತ್ರೀದೇವತೋಪಾಸಕ ನಾದ ಶರಚ್ಚಂದ್ರನೂ ಅತ್ತುಬಿಟ್ಟನು. ವಿಲಾಸಿನಿಯು ಶರಚ್ಚಂದ್ರ ನಿಂದ ಪ್ರತ್ಯುತ್ತರವನ್ನು ನಿರೀಕ್ಷಿಸದೇ ಬೇರೊಂದು ಕೋಣೆಗೆ ಹೋಗಿ ಮೊದಲಿನಂತಲೂ ಅಳುವುದಕ್ಕೆ ಪ್ರಾರಂಭಮಾಡಿದಳು. ಆಕೆಯ ಹೃದಯದಲ್ಲಿ ನೂತನವಾದ ಭೀತಿಯು ಕಾಣಿಸಿಕೊಂಡು, ಆಕೆಯು ವಿಧವಿಧವಾಗಿ ಯೋಚಿಸಿದಳು:—

ನಾನು ಬೆಂಕಿಯನ್ನು ಪ್ರಜ್ವಲಿಸುವಂತೆ ಮಾಡಿದೆನು. ಆದರೆ ಅದು ಎಲ್ಲಿ ಯಾರನ್ನು ಸುಟ್ಟುಬಿಡುವುದೋ ನಾನು ಕಾಣೆ. ವಿನೋ ದಿನಿಗೆ ಎಷ್ಟು ವಿನಾಶವಾಗಬೇಕೋ ಅಷ್ಟೂ ಮಾಡಿದ್ದಾಯಿತು. ಇದ ರಲ್ಲಿ ವಿನೋದಿನಿಯ ದೋಷವಾದರೋ ಕಿಂಚಿತ್ತೂ ಇಲ್ಲ. ಅವಳಿನ್ನೂ ಏನೂ ಅರಿಯದ ಕಂದ. ಅವಳನ್ನು ನಾನು ದುಃಖ ಸಾಗರದಲ್ಲಿ ಮುಳುಗಿಸಿದೆ. ಅವಳು ನನಗೆ ದೂರದವಳಲ್ಲ, ನನ್ನ ತಂಗಿ. ಮೋಸ ವನ್ನರಿಯದವರಲ್ಲಿ ನಾನು ಇಂತಹ ಅತ್ಯಾಚಾರ ಮಾಡಬಹುದೇ? ನನ್ನ ಮೋಸವಾದರೂ ಅವಳಿಗೆ ಗೊತ್ತಾಗುವುದಿಲ್ಲವಲ್ಲ! ನನಗೇತಕೆ

ಈ ದುಷ್ಟಬುದ್ಧಿಯುಂಟಾಯಿತು ? ಈಗ ನಾನೇನು ಮಾಡಲಿ ? ಹೇ ಜಗದೀಶ ! ನಾನು ದುಷ್ಕೃತ್ಯವಮಾಡಲು ಯತ್ನಿಸಿ ಪರಮಾತ್ಮನ ಹೆಸರನ್ನು ವೃಥಾ ಬೀದಿಗೆ ಏತಕೆ ಎಳೆಯಬೇಕು ? ನನ್ನ ಹೃದಯದಲ್ಲಿ ಇದೆಂತಹ ಯಾತನೆ ? ನಾನೇನು ಮಾಡಲಿ ? ಹಿಂತಿರುಗಲೆ ? ಆಗಲಾರದು. ಇಷ್ಟುದೂರ ಯತ್ನಮಾಡಿ ಈಗ ಸುಮ್ಮನಾಗುವುದು ಯುಕ್ತವಲ್ಲ. ನನ್ನ ಚಿತೆಯಾದರೋ ಆರಾರನ್ನು ಸುಟ್ಟು ಬೂದಿ ಮಾಡುವುದೋ ? ನನ್ನ ಸುಖಾಭಿಲಾಷೆಯು ದುಃಖದಲ್ಲಿ ಪರಿಣಮಿಸಿದರೆ ನಾನು ಮಾಡುವುದೇನು ? ಹಾಗಾಗಲಾರದು. ಅಷ್ಟು ಅನರ್ಥಕ್ಕೆ ನಾನು ಆಸ್ಪದ ಕೊಡಲಾರೆನು. ಯಾರು ತಾನೇ ತನ್ನ ತಲೆಯಮೇಲೆ ಕಲ್ಲನ್ನು ಹಾಕಿಕೊಳ್ಳಲು ಯತ್ನಿಸುವರು. ನಾನು ನನ್ನ ಕೆಲಸವನ್ನು ಸಾಂಗವಾಗಿ ನೆರವೇರಿಸಿ ನನ್ನ ಮನೋರಥವನ್ನು ಪೂರ್ತಿಗೊಳಿಸುವೆನು.

ವಿಲಾಸಿನಿಯು ಹೀಗೆ ಯೋಚಿಸುತ್ತಿರುವಲ್ಲಿ, ಹರಮಣಿಯು ಅಲ್ಲಿಗೆ ಬಂದಳು. ಅವಳನ್ನು ನೋಡಿ—ಹರ ! ನನ್ನನ್ನು ಈ ಕಷ್ಟದಿಂದ ಉದ್ಧಾರಮಾಡು. ನಾನು ಬದುಕುವ ಸಂಭವವಿಲ್ಲ ನಾನು ಏನೋ ಮಾಡುವುದಕ್ಕೆ ಹೋಗಿ ಏನೋಮಾಡಿದೆ. ನನ್ನನ್ನು ರಕ್ಷಿಸು; ನನ್ನನ್ನು ರಕ್ಷಿಸು, ಎಂದು ಅಪ್ಪಿಕೊಂಡಳು.

ಹರ—ಈಗ ಪಶ್ಚಾತ್ತಾಪ ಪಡುವುದು ಸರಿಯಲ್ಲ.

ವಿಲಾಸಿನಿ—ಇಲ್ಲಿನವರೆಗೂ ಚೆನ್ನಾಗಿದ್ದಿತು, ಇನ್ನುಮುಂದೆ ಹೀಗಿರುವುದಿಲ್ಲ.

ಹರ—ಇಷ್ಟರಿಂದಲೇ ನಿನ್ನ ಅಭಿಲಾಷೆಯು ಪೂರ್ಣವಾದಲ್ಲಿ, ಮುಂದೆ ನೀನು ಸುಮ್ಮನಾಗಬಹುದು.

ವಿಲಾಸಿನಿಯು ಈ ಮಾತನ್ನು ಕೇಳಿ ಕೊಂಚಹೊತ್ತು ಯೋಚಿಸಿ, ಕಣ್ಣುಗಳನ್ನು ಕೆಂಡದಂತೆ ಕೆಂಪಗೆ ಮಾಡಿಕೊಂಡು—

ಸುಮ್ಮನಿರಬೇಕೆ? ನೀನು ನನಗೆ ಬುದ್ಧಿಹೇಳುವಳು, ನಾನು ಕೇಳುವಳು! ನನ್ನ ಪ್ರಾಣಹೋದರೂ ನಾನು ಸುಮ್ಮನಾಗತಕ್ಕವಳಲ್ಲ. ನನ್ನ ಹಣೆಯಲ್ಲಿ ಬರೆದಂತಾಗಲಿ. ನಾನು ಪಾತಾಳದಲ್ಲಿ ಮುಳುಗಿರುವಾಗ, ಅಲ್ಲಿರುವುದೆಲ್ಲವನ್ನೂ ನೋಡದೇಬಿಡೆನು. ದಿನೋದಿನಿಯು ನನಗೆ ಪರಮಶತ್ರು. ಅವಳ ಪ್ರತಿಯೊಂದು ಮೂಳೆಯಲ್ಲಿಯೂ ಬೆಂಕಿಯನ್ನು ಹತ್ತಿಸಿ ಆಕೆಯನ್ನು ಸುಟ್ಟು ಬೂದಿಮಾಡದೇಬಿಡೆನು, ಎಂದು ಹೇಳಿ ಬಾಗಿಲಲ್ಲಿ ಸಿದ್ಧವಾಗಿದ್ದ ಗಾಡಿಯಲ್ಲಿ ಕುಳಿತಳು. ಗಾಡಿಯು ಗಡಗಡ ಹೊರಟಿತು. ಹರಮಣಿಯು ಹಿಂತಿರುಗಿ ಮನೆಯೊಳಗೆ ಬಂದು ಸೇರಿದಳು.



## ಹತ್ತನೆಯ ಸಂಧಿ.

### ಓಃ ಹೋ ಹೋ!

ಹರಮಣಿಯು ವಿಲಾಸಿನಿಯನ್ನು ಕಳುಹಿಸಿ ಕೊಟ್ಟು ಶರಚ್ಚಂದ್ರನಿದ್ದಲ್ಲಿಗೆ ಬಂದು- ನನ್ನನ್ನು ಇರಹೇಳಲು ಕಾರಣವೇನು? ಎಂದು ಕೇಳಿದಳು.

ಶರತ್—ಹರಮಣಿ! ಕುಳಿತುಕೋ. ಹೇಳು, ನೋಡೋಣ. ಜನರಿಗೆ ಯಾತರಿಂದ ಸುಖವುಂಟಾಗುವುದು?

ಹರ—(ಮುಗುಳುನಗೆಯಿಂದ) ಸುಖವೇ? ಬೇಕಾದಷ್ಟು ಹಣ, ಸುಂದರವಾದ ಮನೆ, ಅಪರಿಮಿತವಾದ ಜಮೀನ್ದಾರಿ, ಇದ್ದರೆ ಸುಖವುಂಟಾಗುವುದು.

ಶರತ್—ನಿನಗೇನೇನಿರುವುದು?

ಹರ—ನನಗೆ? ನಾನು ಪಟ್ಟದರಿವಳು. ನನ್ನಲ್ಲೇನಿದ್ದೀತು? ಓಂದು ಮಲ್ಲಿಗೆ ಮುಡಿಸಲು, ಐನಾರುರೂಪಾಯಿಗಳು ಬಾಳುವ ನಗ

ನಟ್ಟಿಗಳು, ಅಪ್ಪಪ್ಪ ಎಂದರೆ ಹತ್ತಿಪ್ಪತ್ತು ರೂಪಾಯಿಗಳ ನಗದು ಇದ್ದರೆ ತಲೆಗೆ ಮೇಲೆ. ನಾನು ಯಾವಾಗಲೂ ತಮ್ಮಂತಹವರನ್ನು ನಂಬಿರುವೆನು. ನೀವು ಮನಸ್ಸು ಮಾಡಿದರ ನನಗೆ ಆವುದಕ್ಕೇನು ಕಡಮೆ ?

ಶರತ್—ಒಂದು ಗಾರೆಯ ಮನೆಯಾಗಬೇಕಾದರೆ ಎಷ್ಟಾಗಿ ದೀತು ?

ಹರ—ಒಂದೂವರೆ ಅಥವಾ ಎರಡು ಸಾವಿರ ರೂಪಾಯಿಗಳಾದರೆ ಇಟ್ಟಿಗೆಯ ಮನೆಯಾಗುವುದೆಂದು ಯಾರೋ ಹೇಳಿದುದು ಕೇಳಿರುವೆನು. ನಮ್ಮಂತಹವರ ಹಣೆಯಲ್ಲಿ ಆ ಸುಖವೂ ಬರೆದಿರುವುದೇ ?

ಶರತ್—ಬರೆಯದೇ ಏನು ? ನನ್ನ ಪ್ರಶ್ನೆಗಳಿಗೆ; ನಿಜವಾದ ಉತ್ತರಕೊಡು. ನಿನಗೆ ಅಂತಹ ಮನೆಯು ಒಂದು ದೊಡ್ಡ ವಿಷಯ ವಲ್ಲ.

ಹರ—ಸ್ವಾಮಿಗ್, ತಮ್ಮಲ್ಲಿ ವಂಚನೆಯೇ ? ಮನೆಗೋಸ್ಕರ ವಾಗಿ ನಾನು ತಮ್ಮಲ್ಲಿ ನಿಜವನ್ನು ಹೇಳಬೇಕೆ ? ನಾನು ಯಾವಾಗಲೂ ನಿಮ್ಮ ಪಾದದಲ್ಲಿ ಬಿದ್ದಿರುವ ದಾಸಿ. ಅದೇನಪ್ಪಣೆ ?

ಹರಮಣಿಗೆ ಆಗಲೆ ತಲೆ ತಿರುಗಿಹೋಯಿತು, ಅಷ್ಟರಲ್ಲಿಯೇ ತನ್ನ ಭವಿಷ್ಯದ್ದಶೆಯನ್ನು ಯೋಚಿಸಲಾರಂಭಿಸಿದಳು. ವಿಲಾಸಿನಿಯು ಮೊದಲೇ ಬೇಕಾದಹಾಗೆ ಹಣಕಾಸುಗಳನ್ನು ಕೊಡುವುದಾಗಿ ಮಾತು ಕೊಟ್ಟಿರುವಳು. ಈಗ ಹರಮಣಿಗೆ ಒಂದು ಸುಂದರವಾದ ಮನೆಯಾಗುವ ಹಾಗೆ ಸೂಚನೆಯಿರುವುದು. ರಸಿಕಳಾದ ಹರಮಣಿಗೆ ಮತ್ತಾಗಬೇಕಾದುದೇನು ? ಅವರಿಬ್ಬರ ಉದ್ದೇಶವು ನೆರವೇರಿದರೆ ನೆರವೇರಲಿ, ಇಲ್ಲವಾದರೆ ನಾಶವಾಗಿಹೋಗಲಿ. ಅದರಿಂದ ಹರಮಣಿಗೆ ಆಗಬೇಕಾದುದೇನು ? ಒಂದು ಮನೆ ; ಕೈತುಂಬ ಹಣ.

ಶರಚ್ಚಂದ್ರನು ಹರಮಣಿಯ ಮಾತನ್ನು ಕೇಳಿ—ನಿಜವಾಗಿ ಹೇಳು, ವಿನೋದಿನಿಯು ನನಗೇತಕೆ ಕಾಗದವನ್ನು ಬರೆಯು ಲಿಲ್ಲ ? ಎಂದನು.

ಹರ—ಅದು ನನಗೇನುಗೊತ್ತು ?

ಶರತ್—ನನಗೆಲ್ಲವೂ ಗೊತ್ತು. ಅದು ನಿನಗೂ ನಿನ್ನ ಯಜ ಮಾನಿಗೂ ಗೊತ್ತಿರುವುದು. ವಿಲಾಸಿನಿಯು ತಂಗಿಯ ವಿಷಯ ವನ್ನು ಹೇಳಲು ಹೆದರುವಳು. ನೀನು ಏತಕ್ಕಾಗಿ ಹೆದರಬೇಕು ?

ಹರ—ನಾನು ಏನುಹೇಳಲಿ ? ಶರಚ್ಚಂದ್ರ !

ಶರತ್—ತಿಳಿದಿದ್ದುದನ್ನು ಹೇಳು. ಎರಡುಸಾವಿರ ರೂಪಾ ಯಿಗಳಿಗಿಂತಲೂ ನಿನಗಾಗಬೇಕಾದುದೇನು ?

ಹರ—ದೊಡ್ಡದೊಡ್ಡವರ ಮನೆಯಲ್ಲಿ ದೊಡ್ಡದೊಡ್ಡ ವಿಷಯ ಗಳು. ನಾನಾದರೋ ಕೇವಲದಾಸಿ

ಶರತ್—ನೀನು ಭಯಪಡಬೇಕಾದುದಿಲ್ಲ, ಹೇಳು.

ಹರ—ನನಗೇನೋ ಭಯವಾಗುವುದು. ನನಗೆ ಮನೆಯೂ ಬೇಡ, ಗಿನೆಯೂಬೇಡ. ನೀನು ಇದನ್ನು ಕೇಳಬೇಕಾದ ಆವ ಶ್ಯಕವೂ ಇರುವುದಿಲ್ಲ.

ಶರತ್—ಹರ ! ನೀನುಹೇಳು, ನಾನು ಕೋಪಿಸಿಕೊಳ್ಳು ವುದಿಲ್ಲ.

ಹರ—ದುಷ್ಟರು ಬಾಯಿಗೆ ಬಂದಹಾಗೆ ಮಾತನಾಡುವರು. ಅದಕ್ಕೆ ನಾವು ಕಿವಿಗೊಟ್ಟರೆ ಸಾಧ್ಯವಾದೀತೆ ?

ಶರತ್—ಅದರಲ್ಲಿ ನೀನು ಕಂಡು ಕೇಳಿದುದನ್ನು ಹೇಳು.

ಹರ— (ಯೋಚಿಸುವಳಂತೆ ನಟಿಸಿ) ಸ್ವಾಮಿ, ನಾನು ಹೇಳಲಾರೆ. ನಾನು ಹೊರಟುಹೋಗುವೆನು. ದೊಡ್ಡಮ್ಮನವರು ಬಂದುನೋಳೆ ಕೋಪಿಸಿಕೊಂಡಾರು ?

ಇದನ್ನು ಕೇಳಿದ ಶರಚ್ಚಂದ್ರನಿಗೆ ಸಂಶಯವು ತಲೆದೋರಿ, ಆತನು ತತ್ತರಗುಟ್ಟುತ—ಹರ! ನೀನು ಏನುಕೇಳಿದರೂ ಕೊಡು ವೆನು. ನೀನು ಖಂಡಿತವಾಗಿಯೂ ತಿಳಿಸಬೇಕು, ಎನಲಾಗಿ, ಹರ ಮಣಿಯು-ಪ್ರಭೋ, ನನಗೆ ಹೇಳಲು ಬಾಯೇಬರುವುದಿಲ್ಲ. ನಾನು ಹೋರತುನೆನು, ಎಂದು ಎದ್ದುನಿಂತಳು ಶರಚ್ಚಂದ್ರನು ಆಕೆಯ ಕಾಲುಗಳನ್ನು ಹಿಡಿದುಕೊಂಡು, ಅಯ್ಯೋ! ಎಂದು ಅತ್ತನು. ಇನ್ನು ಪರೀಕ್ಷಿಸುವುದು ಸರಿಯಲ್ಲವೆಂದು ಹರಮಣಿಯು—ನಾನು ಏನುಹೇಳಲಿ? ಚಿಕ್ಕಮ್ಮನವರ ವಿಷಯದಲ್ಲಿ ಜನರು—

ಆಕೆಯ ಬಾಯಿಂದ ಮುಂದೆ ಮಾತು ಹೊರಡಲಿಲ್ಲ. ಆಗ ಶರತ್ತಿನ ಅಂಗಾಂಗಗಳೆಲ್ಲವೂ ನಡುಗುತಿದ್ದುವು. ಅವನು ತೊದಲು ನುಡಿಯಿಂದ—ಹೇಳುಹೇಳು, ಜನರು ಏನುಹೇಳುವರು ? ಎಂದು ಬೇಡಿಕೊಂಡನು. ಅದಕ್ಕೆ ಹರಮಣಿಯು—ವಿನೋದಿನಿಯ ನಡ ತೆಯು ಕೆಟ್ಟಿರುವುದೆಂದು ಜನರು ಆಡಿಕೊಳ್ಳುವರು, ಎಂದು ಹೇಳಿ ಸುಮ್ಮನಾದಳು.

ಶರಚ್ಚಂದ್ರನ ಕಿವಿಯಲ್ಲಿ ಈ ಮಾತು ಬಿದ್ದೊಡನೆಯೇ ಅವನು ಅಲ್ಲಿಂದ ತಟ್ಟನೆದ್ದು ಎದ್ದು ನಿಂತನು. ಆಗ ಅವನ ತಲೆಯ ಮೇಲೆ ಸಿಡಿಲು ಬಡಿದಂತಾಯಿತು. ಹಸಿದ ಹೆಣ್ಣು ಸರ್ಪವನ್ನು ಅವನು ತುಳಿದಿದ್ದರೂ, ಅವನು ಅಷ್ಟು ಹೆದರಬೇಕಾಗಿರಲಿಲ್ಲ. ಸಿಡಿಲು ಬಡಿದ ಪರ್ವತವು ಹೇಗೆ ಪುಡಿಪುಡಿಯಾಗಿ ಹೋಗು ವುದೋ, ಹಾಗೆಯೇ ಶರಚ್ಚಂದ್ರನು ಹರಮಣಿಯ ಮಾತನ್ನು ಕೇಳಿ ವಿಶಕಲಿತವಾದ ಮಸ್ತಿಷ್ಕವುಳ್ಳವನಾಗಿ ನೆಲದಮೇಲೆ ದಢೀರೆಂದು ಬಿದ್ದುಬಿಟ್ಟನು. ಆಗ ಅವನ ಶರೀರದಲ್ಲಿ ರಕ್ತವಿರಲಿಲ್ಲ, ಮಾಂಸ ವಿರಲಿಲ್ಲ, ಮೇದಸ್ಸಿರಲಿಲ್ಲ' ಮೂಳೆ ಯಿರಲಿಲ್ಲ, ಆದರೆ ಅವನು ಮಾತ್ರ ಇದ್ದನು, ಅವನನ್ನು ಆಶ್ರಯಿಸಿಕೊಂಡು ಯಾತನೆಯಿದ್ದಿತು.

ಸಾವಿರಾರು ಚೇಳುಗಳೂ, ಸಾವಿರಾರು ಹಾವುಗಳೂ, ಸಹಸ್ರಮುಖ ವಾಗಿ ಕಚ್ಚಿದೊಡನೆಯೇ ಸಾವಿರಾರು ಹರಿತವಾದ ಕತ್ತಿಗಳಿಂದ ಕತ್ತರಿಸಲುಪಕ್ರಮಿಸಿದರೆ ಉಂಟಾಗತಕ್ಕ ಯಾತನೆಯೂ ಶರ ಚ್ಚಂದ್ರನ ಪ್ರಕೃತಯಾತನೆಯ ಶತಾಂಶದಲ್ಲಿ ಒಂದಂಶದಷ್ಟೂ ಇರಲಿಲ್ಲ ವೆಂದು ನಾವು ಹೇಳುವೆವು. ಇಷ್ಟವಿದ್ದವರು ಕೇಳಲಿ, ಇಷ್ಟವಿಲ್ಲ ದವರು ಈಭಾಗವನ್ನು ಬಿಟ್ಟು ಮುಂದಕ್ಕೆ ಓದಿಕೊಂಡು ಹೋಗಲಿ.

ಶರಚ್ಚಂದ್ರನು ಬಹಳ ಹೊತ್ತಿನಮೇಲೆ- ಹರ, ಇನ್ನು ನೀನು ಹೊರಡಬಹುದು, ಎಂದನು. ಹರಮಣಿಯು ಹೊರಟೇ ಹೋದಳು. ತನಗೆ ಬರಬೇಕಾದ ಮನೆಯ ವಿಷಯದಲ್ಲಿ, ಅವಳು ತಕ್ಕ ಬಂದೋ ಬಸ್ತು ಮಾಡುವುದಕ್ಕೆ ಆಗ ಅವಕಾಶವಿರಲಿಲ್ಲ. ಮತ್ತೊಂದುವೇಳೆ ನೋಡಿಕೊಳ್ಳೋಣವೆಂದು ಹರಮಣಿಯುಹೊರಗೆ ಹೊರಟುಬಂದಳು. ಅಷ್ಟರೊಳಗಾಗಿ ಶರಚ್ಚಂದ್ರನು ಏನೋ ಯೋಚಿಸಿಕೊಂಡು— ಹರಮಣಿ! ಹರಮಣಿ! ಎಂದು ಗಟ್ಟಿಯಾಗಿ ಅರಚಿದನು. ಹರ ಮಣಿಯು ಮತ್ತೆ ಹಿಂತಿರುಗಿ ಬಂದನು

ಶರತ್—ನಾನು ಅದನ್ನು ಕಣ್ಣಿನಿಂದ ನೋಡಬೇಕಲ್ಲ ?

ಹರ—ಯತ್ನಮಾಡಿದರೆ ನೋಡಬಹುದು.

ಶರತ್—ಈಕೆಯು ಯಾರೊಡನೆ ಅಸ್ವಾದ್ಯವಹಾರ ಮಾಡುವ ಳೆಂದು ವರ್ತಮಾನ ಹುಟ್ಟಿರುವುದು ?

ಹರ—ಉಪಾಧ್ಯಾಯ ಇಂದಿರೇಶ ಮಹಾಶಯರೊಡನೆ ಎಂದು ಎಲ್ಲರೂ ಗುಸಗುಸ, ಪಿಸಪಿಸ ಮಾತನಾಡಿಕೊಳ್ಳುತ್ತಿರುವರು.

ಇದನ್ನು ಕೇಳಿ ಶರಚ್ಚಂದ್ರನು ಎದೆಯನ್ನು ಒಡೆದುಕೊಳ್ಳುತ್ತಾ ಹುಚ್ಚನಂತೆ ಕೋಣೆಯೆಲ್ಲವನ್ನೂ ಸುತ್ತಿದನು. ಇದನ್ನು ನೋಡಿದ ಹರಮಣಿಯು ಭೀತಿಗೊಂಡವಳಾಗಿ ಒಂದು ಕ್ಷಣವೂ ಅಲ್ಲಿ ನಿಲ್ಲದೇ ಹೊರಗೆ ಹೊರಟುಬಂದಳು.

ಇಷ್ಟೆನ್ನುವುದರೊಳಗಾಗಿ ಸೂರ್ಯದೇವನು ಮುಳುಗುವುದರಲ್ಲಿದ್ದನು. ಕ್ರಮವಾಗಿ ರಾತ್ರಿಯೂ ಆಯಿತು. ಹರಮಣಿಯೂ ಒಂದು ದೀಪವನ್ನು ಕಚ್ಚಿಸಿ ಹೊರಟುಹೋದಳು.

ಶರಚ್ಚಂದ್ರನು ಅಪಾರವಾದ ಚಿಂತಾಸಾಗರದಲ್ಲಿ ಮುಳುಗ ತೇಲಾಡಲುಪಕ್ರಮಿಸಿದನು. ರಾತ್ರಿಯ ಮೊದಲನೆಯ ಜಾವವು ಕಳೆಯಿತು. ವಿದ್ಯಾನಗರದಲ್ಲಿ ಪ್ರಕೃತಿಯು ಪ್ರಶಾಂತಭಾವವನ್ನು ತಾಳುವುದಕ್ಕೆ ಪ್ರಾರಂಭವಾಯಿತು. ಎಲ್ಲೆಲ್ಲಿಯೂ ನಿಶ್ಶಬ್ದತೆಯು ಆಧಿಪತ್ಯ ಮಾಡುತಿರುವುದನ್ನು ನೋಡಿ, ಶರಚ್ಚಂದ್ರನು ಎದ್ದು ಕುಳಿತು, ಸುತ್ತಲೂ ನೋಡಿದನು. ಒಂದುಕಡೆ ಪುಸ್ತಕಗಳ ಬೀರು, ಇನ್ನೊಂದುಕಡೆವೈದ್ಯ ಶಾಸ್ತ್ರದ ಶಸ್ತ್ರಾಸ್ತ್ರಗಳ ಬೀರು; ಮತ್ತೊಂದು ಕಡೆ ಬಟ್ಟೆಬರೆಗಳಪೆಟ್ಟಿಗೆ, ಮಗದೊಂದು ಕಡ ಗೃಹಸಾಮಗ್ರಿಗಳ ಪೆಟ್ಟಿಗೆ. ಒಂದು ಮೂಲೆಯಲ್ಲಿ ಮಾತ್ರ ಅಸ್ಥಿಮಾತ್ರಾ ವಶಿಷ್ಟವಾದ ಒಂದು ಪ್ರೇತಸ್ವರೂಪವು ನಿಲ್ಲಿಸಲ್ಪಟ್ಟಿದ್ದಿತು. ವೈದ್ಯವಿದ್ಯಾಲಯಗಳಲ್ಲಿ ಇಂತಹ ಪ್ರೇತರೂಪಗಳನ್ನು ಪದೇ ಪದೇ ನೋಡಬಹುದು. ಭ್ರಾಂತನಾದ ಶರಚ್ಚಂದ್ರನು ಆಪ್ರೇತ ಮೂರ್ತಿಯನ್ನು ನೋಡಿ, ಉನ್ಮತ್ತನಂತೆ ಮಾತನಾಡಿದನು.

ಹೇ ನರಕಂಕಾಲ! (Skeleton) ಈ ಲೋಕದಲ್ಲಿ ನೀನೇ ಧನ್ಯ. ನೀನೇ ಸುಖಿ. ನಿನ್ನ ಅವಸ್ಥೆಯು ಪ್ರಕೃತ ನನಗೆ ಪ್ರಾರ್ಥನೀಯವಾದುದು. ನಿನ್ನ ತಿಳಿವಳಿಕೆಯು ಸರ್ವಪ್ರಕಾರದಲ್ಲಿಯೂ ಶ್ರೇಷ್ಠವಾದುದು. ನೀನು ಜಗತ್ತಿಗೆ ಏನೇನು ಉಪದೇಶಮಾಡಿಲ್ಲ? ಯಾವ ಜಗತ್ತಿನಲ್ಲಿ ಪಾಪ, ತಾಪ, ಕಾಪಟ್ಯ ತುಂಬಿರುವುದೋ ಅದನ್ನು ತ್ಯಾಗಮಾಡಲು ಮಾರ್ಗವನ್ನು ತೋರಿಸಿರುವೆ ಹೇ ದೇವ! ಹೇ ಪ್ರಭೋ! ನಾನು ಯಾವ ಉಪಾಯದಿಂದ, ಯಾವ ಕೌಶಲದಿಂದ ಈ ಯಾತನೆಯನ್ನು ಹೋಗಲಾಡಿಸಲಿ? ದಯವಿಟ್ಟು ನನಗೆ ತಿಳಿಸು. ಈ ಲೋಕದಲ್ಲಿ ನಾವು ಯಾರನ್ನು ಪ್ರಾಣಕ್ಕಿಂತಲೂ ಅಧಿಕರೆಂದು

ತಿಳಿದಿರುವೆವ್ರೋ, ಅವರೇ ನಮ್ಮ ವಿಷಯದಲ್ಲಿ ಕಾಲಸರ್ಪವಾಗಿ ಪರಿಣಮಿಸುವುದಾದರೆ ನಾವು ಮಾಡಬೇಕಾದುದೇನು? ಹೇ ದಯಾಸಿಧೇ! ದಯವಿಟ್ಟು ನನಗೆ ತಿಳಿಸು.

ಹೇ ಸರ್ವಜ್ಞಮೂರ್ತೇ! ನೀನು ಯಾವ ಉಪಾಯಮಾಡಿ ಈ ಯಾತನೆಯಿಂದ ಪಾರಾಗಿರುವೆ? ತಿಳಿಸು. ಹೇ ಭಾಗ್ಯವ! ಅಥವಾ ವಿಧಿಯು ಈ ಯಾತನಾನುಭವವನ್ನು ನಿನ್ನ ಹಣೆಯಲ್ಲಿಯೋ ಬರೆಯಲಿಲ್ಲವೆ? ಎಲೈ ಮಹಾತ್ಮನೆ! ಸಂಸಾರಸಾಗರವನ್ನು ದಾಟುವುದಕ್ಕೆ ನನಗೆ ಮೂಲಮಂತ್ರವನ್ನಾದರೂ ಉಪದೇಶಮಾಡಬಾರದೆ? ಹೇ ಪ್ರಾಣಬಂಧೋ! ಹೇಳು ನೋಡೋಣ, ಇಹಪರಗಳಲ್ಲಿ ಹೆಂಗಸಿಗಿಂತಲೂ ನೀಚವಾದ ಪ್ರಾಣಿಯು ಆವುದಿರುವುದು? ಹೇ ಗುರುಮೂರ್ತೇ! ಕವಿಜನರು ಸ್ತ್ರೀಯರನ್ನು ಸೌಮ್ಯವಾಗಿಯೂ, ಆನಂದಜನಕವಾಗಿಯೂ ಇರುವ ಪದಾರ್ಥಗಳಿಗೆ ಹೋಲಿಸುವರು. ಅವರನ್ನು ನಾವು ಲೋಕಾನಭಿಜ್ಞರೆಂದು ಏತಕೆ ಕರೆಯಬಾರದು? ಅವರ ಅಗಾಧವಾದ ಹೃದಯಸಾಗರದಲ್ಲಿ ಕಾಲಕೂಟವಿಷವಿರುವುದು. ಅದನ್ನು ಯಾರು ಬಲ್ಲರು? ಹೇ ಸರ್ವಾಂತರ್ಯಾಮಿನ್! ರಮಣಿಯರ ಪ್ರೇಮಕ್ಕಿಂತಲೂ ಅಸಾರವಾದುದೂ, ಕ್ಷಣಿಕವಾದುದು ಆವುದಾದರೂ ಇದ್ದಲ್ಲಿ ನನಗೆ ತಿಳಿದು ಹೇಳು. ಹೇ ಸ್ವಾಮಿನ್! ನಿನಗೆ ನಾನು ಪ್ರಣಾಮಮಾಡುವೆನು. ನನ್ನ ಕ್ಲೇಶನಿವಾರಣಾರ್ಥವಾಗಿ ಒಂದೆರಡು ಉಪದೇಶಗಳನ್ನಾದರೂ ಮಾಡು. ಮರಣದಲ್ಲಿ ಸುಖವೇನಿರುವುದೆಂಬುದನ್ನು ನನಗೆ ಕೊಂಚಮಟ್ಟಿಗೆ ತಿಳಿಸು. ಸತ್ತರೇನಾಗುವುದು? ಏನೂ ಆಗದೇ ಹೋದರೆ, ನನ್ನನ್ನು ನಿನ್ನ ಸಹಚರನನ್ನಾಗಿ ಮಾಡಿಕೊಳ್ಳಬಾರದೇತಕೆ? ನಿನ್ನಂತೆಯೇ ನಾನು ಸಂಸಾರವನ್ನು ಉಪೇಕ್ಷೆಮಾಡಿ, ಮಾನವಹೃದಯದಲ್ಲಿರುವ ದೌರ್ಬಲ್ಯವನ್ನೂ, ಚಾಂಚಲ್ಯವನ್ನೂ, ಕಾಪಟ್ಯವನ್ನೂ ನೋಡಿ ಧಿಕ್ಕಾರಮಾಡಲು

ಇಷ್ಟಪಡುವೆನು. ನಿನ್ನಂತೆಯೇ ಸಂಸಾರದ ಸುಖದುಃಖಗಳಲ್ಲಿಯೂ ಔದಾಸೀನ್ಯವನ್ನು ತಾಳಿ, ಕ್ಷಣಿಕವಾದ ಪ್ರಪಂಚದಲ್ಲಿ ಜನರು ಶಾಶ್ವತ ಬುದ್ಧಿಯನ್ನಿಟ್ಟು ಹಾಹಾಕಾರ ಪಡುತ್ತಿರುವುದನ್ನು ನೋಡಿ ಹಿಯ್ಯಾಳಿಸಲು ಇಷ್ಟಪಡುವೆನು. ಹೆಂಗಸರನ್ನು ಪರದೇವತೆಯೆಂದು ತಿಳಿದು ಅವರ ಪಾದಮೂಲದಲ್ಲಿ ಸರ್ವಸ್ವವನ್ನೂ ಅರ್ಪಣೆಮಾಡಿ ಧನ್ಯರಾದೆವೆಂದು ತಿಳಿದ ಮೂಢಜನರನ್ನು ಕಸಕ್ಕಿಂತಲೂ ಕಡೆಯಾಗಿ ಎಣಿಸುವುದಕ್ಕೆ ಇಷ್ಟಪಡುವೆನು.

ಶರಚ್ಚಂದ್ರನು ಹೀಗೆ ಹೇಳುತ ಹೇಳುತ, ಕಂಕಾಲದ ಸಮೀಪಕ್ಕೆ ಬಂದು, ಎಲೈ ನಿರ್ದಯನೆ! ನಾನು ಎಷ್ಟು ಬಗೆಯಲ್ಲಿ ನಿನ್ನನ್ನು ಬೇಡಿದರೂ ನಿನಗೆ ಬಂದು ಮಾತನ್ನಾಡುವುದಕ್ಕೂ ದಯೆಬಾರದ? ಎಂದು ಅದನ್ನು ಹಿಡಿದುಕೊಂಡನು. ಕಂಕಾಲವು ಆಧಾರತಪ್ಪಿ ಲಟ್ ಲಟ್ ಎಂದು ಮುರಿದು ಕೆಳಗೆ ಬಿದ್ದಿತು. ಇದನ್ನು ನೋಡಿದ ಕೂಡಲೆ ಶರಚ್ಚಂದ್ರನಿಗೆ ಜ್ಞಾನೋದಯವಾಗಿ ಅವನು ಅಲ್ಲಿಂದೆದ್ದು ಬಂದು ಹಾಸಿಗೆಯಲ್ಲಿ ಮಲಗಿದನು. ಅವನು ಹಾಸಿಗೆಯಲ್ಲಿ ಹೊರಳಾಡುತ್ತಿರುವಾಗಲೇ ಸೂರ್ಯದೇವನು ಪೂರ್ವದಿಕ್ಕಿನಲ್ಲಿ ಬಂದು ಮಾರುದೂರ ಎದ್ದಿದ್ದನು. ಆಗ ಮಧುಮಾಧವನು ಬಂದು ಶರಚ್ಚಂದ್ರನನ್ನು ಕಂಡನು. ಶರತ್ತು ಮಧುವನ್ನು ಹಿಡಿದುಕೊಂಡು-ಅಯ್ಯೋ! ನಿನ್ನ ಮಾತೇ ನಿಜ. ಶ್ರೀ ವ್ಯಾಸಮಹರ್ಷಿಗಳು ಹೇಳಿರುವುದೇ ವೇದವಾಕ್, ಎಂದನು.

ಅದಕ್ಕೆ ಮಧುಮಾಧವನು ನಗುತ ಹೇಳಿದುದು:—

"ಓಃ ಹೋ ಹೋ."



# ಹನ್ನೊಂದನೆಯ ಸಂಧಿ.

## ಪ್ರತಿಫಲ.

ದಿನಗಳು ಕಳೆದುಹೋಗುವುವು. ದಿನಗಳು ಕಳೆದ ಹಾಗೆಲ್ಲ ಮಾನಸಿಕ ವ್ಯಥೆಯು ಕಡಮೆಯಾಗುವದೆಂದು ಲೋಕವು ತಿಳಿದಿರುವುದು. ವಿನೋದಿನಿಗೆ ಮಾತ್ರ ಯಾತನೆಯು ದಿನೇ ದಿನೇ ಅಧಿಕವಾಗುತ್ತಿದ್ದಿತೇ ಹೊರತು, ಅದು ಕಡಮೆಯಾಗುವ ಚಿಹ್ನೆಯೇ ಇರಲಿಲ್ಲ. ವಿದ್ಯಾನಗರದಿಂದ ವಿಲಾಸಿನಿಯೂ ಹರಮಣಿಯೂ ಮನೆಯು ಸೇರಿ ಹದಿನೈದು ದಿನಗಳಾಗುತ ಬಂದುವು. ಅವರಿಬ್ಬರೂ ಬೀಸಿದ ಮೋಸದ ಬಲೆಯಲ್ಲಿ ಬಾಲೆಯಾದ ವಿನೋದಿನಿಯನ್ನು ಸಿಕ್ಕಿಸಿಕೊಂಡು ಅವಳ ಯಾತನೆಯು ಕಡಮೆಯಾಗದಂತೆ ನೋಡಿಕೊಳ್ಳುತ್ತಿದ್ದರು. ವಿನೋದಿನಿಯಾದರೇನು ? ಎಲ್ಲರೂ ಈ ತರದ ಬಲೆಯಲ್ಲಿ ಸಿಕ್ಕಿದರೆ ನರಳಬೇಕಾದುದೇ. ಎಂತಹ ವಿದ್ಯಾವಂತನೂ, ಒಂದು ದಿನವಲ್ಲದಿದ್ದರೆ ಮತ್ತೊಂದು ದಿನವಾದರೂ ಹೇಳಿಕೆಯ ಮಾತಿಗೆ ಕಿವಿಕೊಡಲೇ ಬೇಕಾಗುವುದು. ಹೆಣ್ಣು ಹೆಂಗಸಾದ ವಿನೋದಿನಿಯು ಅಕ್ಕನ ಮಾತನ್ನು ನಂಬದಿರಲು ಕಾರಣವೇನು ? ಅಕ್ಕನು ಹೇಳಿದ ಮಾತೆಲ್ಲವೂ ನಿಜವೆಂದು ವಿನೋದಿನಿಯು ನಂಬಿ ಇಲ್ಲದ ವ್ಯಸನಕ್ಕೆ ಗುರಿಯಾಗಿ ನಿತ್ಯವೂ ಕೊರಗಿ ಕೊರಗಿ ಸಾಯಲಾರಂಭಿಸಿದಳು. ಈಸಂಕಟದ ಮಧ್ಯದಲ್ಲಿಯೂ ಭಗವಂತನನ್ನು ಬೇಡಿಕೊಳ್ಳುತ್ತಿದ್ದಳು:-

ಅನಾಥಬಂಧೋ ! ಬಾಲೆಯಾದ ನನಗೆ ನೀನು ಇಷ್ಟು ಯಾತನೆಯನ್ನುಂಟು ಮಾಡಬಹುದೇ ? ಯಾವ ಅಪರಾಧಕ್ಕೆ ನನ್ನ ಮೇಲೆ ನೀನು ದಂಡವನ್ನೆತ್ತಿರುವೆ ? ಏನೂ ತಿಳಿಯದೆ ನಾನು ನಿನ್ನ ಕೋಪಕ್ಕೆ ಪಾತ್ರವಾಗುವಂತಹ ಅಪರಾಧವನ್ನೇನು ಮಾಡಿರುವೆನು? ಆಪದ್ಬಾಂಧವ ! ಒಂದುವೇಳೆ ಅಪರಾಧವಿದ್ದರೂ ದಯಾನಿಧಿಯಾದ ನೀನು ಕ್ಷಮಿಸಲಾರೆಯಾ ? ತಪ್ಪೇನೆಂಬುದನ್ನು ನನಗೆ ತಿಳಿಸು,

ನಾನು ಅವನ್ನು ಸರಿಪಡಿಸಿಕೊಳ್ಳುವೆನು. ಜಗಜ್ಜನ್ಮಾದಿಕಾರಣ! ನಿನಗಿಂತಲೂ ನ್ಯಾಯಪರರು ಯಾರೂ ಇಲ್ಲವೆಂದು ಕೇಳಿರುವೆನು. ನನ್ನ ವಿಷಯದಲ್ಲಿ ಅದು ಎಲ್ಲಿ ಹೋಯಿತು? ದ್ರೌಪದಿಯ ಮಾನ ಸಂರಕ್ಷಣೆ ಮಾಡಿದ ನಿನಗೆ ನಾನು ಭಾರವಾದೆನೇ? ಗಜೇಂದ್ರನನ್ನು ಸಲಹಿದ ನಿನಗೆ ನಾನು ಜ್ಞಾಪಕಕ್ಕೆ ಬರಲಿಲ್ಲವೆ? ಘೋರವಾದ ಪಾಪ ಗಳನ್ನು ಮಾಡಿದ ದುಷ್ಟರನ್ನು ನೀನು ಸ್ಮರಣಮಾತ್ರದಿಂದ ಮೋಕ್ಷಾ ಧಿಕಾರಿಗಳನ್ನಾಗಿ ಮಾಡಿರುವಲ್ಲಿ, ನಾನು ಮಾತ್ರ ನಿನ್ನಿಂದ ತಿರಸ್ಕರಿ ಸಲ್ಪಡುವಷ್ಟು ಮಹಾಪಾತಕಗಳನ್ನು ಮಾಡಿರುವುದೇನು? ಲೋಕ ದಲ್ಲಿ ಅಲ್ಪಜ್ಞರಾದ ಮಾನವರು ಚಾಡಿಯ ಮಾತುಗಳನ್ನು ಕೇಳಿ ದುಷ್ಟರನ್ನು ಯೋಗ್ಯರನ್ನಾಗಿಯೂ, ಯೋಗ್ಯರನ್ನು ದುಷ್ಟರನ್ನಾ ಗಿಯೂ ಮಾಡುವರು. ಅದು ವಿವೇಕವಿಲ್ಲದವರ ಸ್ವಭಾವ. ಜಗದೀಶ ನಾದ ನೀನೂ ಸಾಮಾನ್ಯಜನರಂತೆ ವರ್ತಿಸುವುದಾದರೆ ಪ್ರಪಂಚದಲ್ಲಿ ಸತ್ಯವೆಲ್ಲಿ? ಧರ್ಮವೆಲ್ಲಿ? ನ್ಯಾಯವೆಲ್ಲಿ? ವಿವೇಕವೆಲ್ಲಿ?

ಹೀಗೆ ಹೇಳುತಹೇಳುತ ವಿನಿಯು ಪತಿಯ ವಿಷಯವಾಗಿ ಚಿಂತಿಸಿದಳು.—

ಹೇ ಪ್ರಾಣನಾಥ! ನೀನೇ ನನ್ನ ಹೃದಯಾಧಿದೇವತೆ. ನೀನು ನನಗೆ ಮುಖವನ್ನು ತೋರಿಸು, ತೋರಿಸದಿರು. ನೀನೊಂದು ಕ್ಷಣ ಕಾಲ ಮಾತ್ರ ನನ್ನ ಕೋಣೆಯೊಳಗೆ ಬಾ. ನಾನು ಮರೆಯಲ್ಲಿದ್ದು, ನಿನ್ನ ರೂಪವನ್ನು ಒಂದು ಸಲವಾದರೂ ನೋಡಿ ಅನಂತರ ಪ್ರಾಣ ವನ್ನಾದರೂ ಬಿಡುವೆನು.

ಈ ರೀತಿಯಾಗಿ ವಿನಿಯು ರೋದನ ಮಾಡುತ್ತಿರುವಾಗ ಇಂದಿ ರೇಶನು ಅಲ್ಲಿಗೆ ಬಂದನು. ಆಗ ರಾತ್ರಿ ಸುಮಾರು ಹತ್ತು ಗಂಟೆ ಯಾಗಿದ್ದಿತು. ಇಂದಿರೇಶನು ವಿನಿಯ ದುರ್ದಶೆಯನ್ನು ನೋಡಿ— ಮಗು! ಹೀಗೆ ಅತ್ತರೆ ಏನಾಗುವುದು? ಎಂದು ಕೇಳಿದನು.

ವಿನೋದಿನಿ—ಏನು ಮಾಡೋಣಾಯಿತು ?

ಇಂದಿರೇಶ—ಇನ್ನೂ ಯಾವುದೂ ಸಾಧ್ಯವಾಗಲಿಲ್ಲ.

ವಿನೋದಿನಿ—ಹಾಗಾದರೆ ನಾನು ಅಳದೇ ಏನುಮಾಡಲಿ ?

ಇಂದಿರೇಶ—ಈಗ ಅತ್ತರೆ ಪ್ರಯೋಜನ ವಾಗುವಹಾಗಿಲ್ಲ. ಎಲ್ಲದಕ್ಕೂ ನಿಯಮಿತ ಕಾಲವಿರುವಂತೆಯೇ, ಅಳುವುದಕ್ಕೂ ಕಾಲ ಏರ್ಪಟ್ಟಿರುವುದು. ಈಗಲಾದರೋ ತತ್ತ್ವವನ್ನು ಒಳಹೊಕ್ಕು ತಿಳಿದುಕೊಳ್ಳಬೇಕಾಗಿರುವುದು.

ವಿನೋದಿನಿ—ನನಗೇನು ಗೊತ್ತಾಗುವುದು ?

ಇಂದಿರೇಶ—ನಿನಗೆ ಗೊತ್ತಿರುವ ಮಾತು ಹಾಗಿರಲಿ, ಈಗ ಶರಚ್ಚಂದ್ರನು ಬಂದಿರುವನು. ನಾನು ಅವನನ್ನು ನೋಡುವುದಕ್ಕೆ ಹೋಗಿದ್ದೆನು. ಆದರೆ ಅವನಿಗೆ ದೇಹವಲ್ಲಿ ಸರಿಯಾಗಿಲ್ಲವೆಂಬುದಾಗಿ ಕೇಳಿ ಹೊರಟುಬಂದೆನು. ಅವನು ಬಂದಾಗಿನಿಂದಲೂ ಅವನನ್ನು ಯಾರೂ ನೋಡುವುದಕ್ಕಾಗಿಲ್ಲ.

ವಿನೋದಿನಿ—(ಗಂಭೀರಭಾವದಿಂದ) ಹಾಗಾದರೆ ಗತಿ ?

ಇಂದಿರೇಶ—ನಾಳೆಯ ಬೆಳಗ್ಗೆ ಹೇಗಾದರೂಮಾಡಿ ಅವನನ್ನು ನೋಡಿ ಮಾತನಾಡುವೆನು.

ವಿನೋದಿನಿ—ಅನಂತರ ?

ಇಂದಿರೇಶ—ಅನಂತರ ಗೊತ್ತೇ ಇದೆ. ಕಿವಿ ಹಿಡಿದುಕೊಂಡು ಅವನನ್ನು ನಿನ್ನಲ್ಲಿಗೆ ಕರೆದುಕೊಂಡು ಬರುವೆನು. ಮುಂದೆಲ್ಲವೂ ಸರಿಹೋಗುವುದು.

ವಿನೋದಿನಿಯು ಇದನ್ನು ಕೇಳಿ, ಆಶೆ, ಆನಂದ, ಯಾತನೆ ಇವುಗಳ ಸಮ್ಮೇಳನದಿಂದ ದಿಕ್ಕುತೋರದವಳಾಗಿ ಇಂದಿರೇಶನ ಪಾದಗಳ ಮೇಲೆ ಬಿದ್ದು ತಂದೆ ! ತಾವು ಅಷ್ಟರಮಟ್ಟಿಗೆ ನಡೆಯಿಸಿ ಕೊಟ್ಟರೆ, ನಾನು ತಮಗೆ ಚಿರದಾಸಿಯಾಗಿರುವೆನು, ಅಲ್ಲದೆ,

ನನ್ನ ಭವಿಷ್ಯಜ್ಜೀವನವೇ ತಮ್ಮದಾಗಿರುವುದು. ತಾವು ಪ್ರಕೃತ ನನ್ನನ್ನು ಕಾಪಿಸಬೇಕು. ನಾನು ಈ ಕಷ್ಟವನ್ನು ಬಹುಕಾಲ ಸಹಿಸಿಕೊಂಡಿರಲಾರೆನು, ಎಂದು ಬೇಡಿಕೊಂಡಳು.

ಇಂದಿರೇಶ—ಅಮ್ಮ ಮಗು ! ಇಷ್ಟೇತಕೆ ಸಂಕಟಪಡುವೆ? ಈ ಸಂಸಾರದಲ್ಲಿ ನನಗಾರಿರುವರು ? ನೀನೇ ನನಗೆ ಮಗ, ನೀನೇ ನನಗೆ ಮಗಳು. ವತ್ಸೆ ! ನಿನ್ನ ಕಣ್ಣಿನಲ್ಲಿ ನೀರು ತುಂಬಿತೆಂದರೆ, ನನ್ನ ಹೃದಯವು ಒಣಗಿಹೋಗುವುದು. ಶಾಂತಳಾಗು. ಭಯವೇತಕಮ್ಮ ?

ಹೀಗೆ ಹೇಳಿ ಇಂದಿರೇಶನು ತನ್ನ ವಸ್ತ್ರದಿಂದ ವಿನೋದಿನಿಯ ಕಣ್ಣುಗಳನ್ನು ಒರಸಿದನು,

ಕೋಣೆಯೊಳಗೆ ಹೀಗೆ ನಡೆಯುತ್ತಿರುವಾಗ ಹೊರಗಡೆ ಯಾರೋ ಇದ್ದುಕೊಂಡು, ಇವೆಲ್ಲವನ್ನು ಬಾಗಿಲಿನ ಸಂದಿಯಿಂದ ನೋಡುತ್ತಿದ್ದರು. ಆತನಿಗೆ ಒಳಗೆ ನಡೆಯುತ್ತಿದ್ದ ಮಾತುಕತೆಗಳಾವುವೂ ಕೇಳಿಸಲಿಲ್ಲ. ಕೋಣೆಯೊಳಗಣ ಈ ದೃಶ್ಯವನ್ನು ನೋಡುತ್ತಿದ್ದವನೇ ಶರಚ್ಚಂದ್ರ ಮಹಾಶಯನು. ಶರಚ್ಚಂದ್ರನು ಇದನ್ನು ನೋಡಿ ಹಲ್ಲುಗಳನ್ನು ಕಟಕಟ ಕಡಿಯುತ್ತಾ—ಯಥೇಷ್ಟು, ಇದಕ್ಕಿಂತಲೂ ಇನ್ನೇನಾಗಬೇಕು ? ಎಂದು ತನ್ನಲ್ಲಿ ತಾನೇ ಮಾತನಾಡಿಕೊಂಡನು.

ಇಂದಿರೇಶನು ಬಳಿಕ—ಈಗ ಬಹಳ ಹೊತ್ತಾಯಿತು. ನಾಳೆಯ ಬೆಳಗ್ಗೆ ಒಳ್ಳೆಯ ಸುದ್ದಿಯನ್ನು ತರುವೆನು, ಎಂದು ಹೇಳಿ ಹೊರಟನು. ವಿನೋದಿನಿಯೂ ಆತನ ಹಿಂದುಗಡೆಯೇ ಬಂದಳು. ಆಗ ಮಹಡಿಯ ಸೋಪಾನಾವಳಿಗಳ ಮುಂದುಗಡೆ ಯಾರೋ ನಿಂತಿರುವುದು ಆಕೆಗೆ ಗೊತ್ತಾಗಲು, ಆಕೆಯು ಕೂಡಲೆ [illegible] ತಿರುಗಿ ನೋಡಿದಳು.. ಶರ

ಚ್ಚಂದ್ರನು ಅಲ್ಲಿ ನಿಂತಿದ್ದನು. ಆಗ ವಿನೋದಿನಿಗುಂಟಾದ ಆನಂದಕ್ಕೆ ಪಾರವಿರಲಿಲ್ಲ. ಆಕೆಯು, ತನ್ನ ಪ್ರಾಣಕಾಂತನ ಕಾಲುಗಳಮೇಲೆ ಬಿದ್ದು ಕ್ಷಮೆಯನ್ನು ಬೇಡುವುದಕ್ಕೆ ಇದೇಸಮಯವೆಂದು ತಿಳಿದು, ಆತನಿದ್ದಲ್ಲಿಗೆ ಓಡಿಬಂದು, ಆತನ ಕಾಲುಗಳಮೇಲೆ ಬಿದ್ದುಬಿಟ್ಟಳು.

ಆಗ ಶರಚ್ಚಂದ್ರನು—ರಂಡೆ ! ದೂರಹೋಗು. ನೀನು ನನಗೆ ಯಾರು ? ನಾನು ನಿನಗೆ ಯಾರು ? ಎಂದು ಹೇಳಿ ಆಕೆಯನ್ನು ಕಾಲಿನಿಂದ ಒದೆದು ಹೊರಟುಹೋದನು. ವಿನೋದಿನಿಯು, ಹಾ ನಾಥ ! ನನಗೆ ಇನ್ನು ಮರಣವೇಲೇಸು, ಎಂದು ಮನಕರಗುವಂತೆ ಗಟ್ಟಿಯಾಗಿ ರೋದನಮಾಡಿ ಕೆಳಗೆ ಬಿದ್ದು ಬಿಟ್ಟಳು.

---

## ಹನ್ನೆರಡನೆಯ ಸಂಧಿ.

### ಪ್ರೇಮಪಿಪಾಸಾ.

ರಾತ್ರಿ ಒಂದು ಗಂಟೆಯಾಯಿತು, ಆದರೂ ಶರಚ್ಚಂದ್ರನಿಗೆ ನಿದ್ರೆ ಹತ್ತಲಿಲ್ಲ. ಅವನಿಗೆ ನಿದ್ರೆಯೂ ಬೇಕಾಗಿರಲಿಲ್ಲ. ಹೊತ್ತು ಕಳೆಯುವುದು ಅತಿ ಪ್ರಯಾಸಕ್ಕಿಟ್ಟತಾದ್ದರಿಂದ, ಅವನು ಕೋಣೆಯಲ್ಲಿಯೇ ಶತಪಥ ತಿರುಗಿದನು, ಅವನ ಮನೋವೃತ್ತಿಯು ಬಹಳ ಭಯಂಕರವಾಗಿಯೂ, ಸಂಕಲ್ಪಶೂನ್ಯವಾಗಿಯೂ ಅವ್ಯವಸ್ಥಿತವಾಗಿಯೂ ಇದ್ದಿತು. ಚಿಂತಾಸಮುದ್ರವೆಂಬ ಅಧಃಪಾತಾಳದ ಅಡಿಯಲ್ಲಿ ದಿಕ್ಕುತೋರದೇ ಮುಳುಗಿರುವ ಮನಸ್ಸಿಗೆ ಸಹಜವಾಗಿ ಶಾಂತಿಯೆಂಬ ದಡವು ಸಿಕ್ಕುವ ಪಾಪವುಂಟೇ ?

ಅಂತಃಪುರದಲ್ಲಿ ಒಬ್ಬ ಹುಡುಗಿಯೂ ಏಕಾಕಿನಿಯಾಗಿ ಕುಳಿತುಕೊಂಡು ಅತ್ತೇ ಅಳುವಳು. ಅನವರತವೂ ಅಳುತ್ತಿರುವಳು ವಿನೋದಿನಿ. ಅವಳ ಕೋಣೆಯಲ್ಲಿ ದಾಸಿಯೊಬ್ಬಳು ನಿದ್ರಾ

ಪರವಶಳಾಗಿ ಮಲಗಿರುವಳು. ನಿದ್ರಾಂಗನೆಯು ಜೊತೆಯೊಬ್ಬ ಸನತಿಯು ಕಾಟವಿಲ್ಲದವರನ್ನೇ ಮೋಹಿಸಿಬಂದು ರಾತ್ರಿಯೆಲ್ಲಾ ವಿಹರಿಸುತ್ತಿದ್ದು ಪ್ರಾತಃಕಾಲವಾದೊಡನೆಯೇ ಎಲ್ಲಿಯೋ ಹೊರಟು ಹೋಗುವಳು. ವಿನೋದಿನಿಯಾದರೋ ನಿದ್ರೆಯಿಲ್ಲದೆ, ಸಂಕಟ ಪಟ್ಟು ಯೋಚಿಸತೊಡಗಿದಳು:—

ಸ್ವಾಮಿನ್ ! ನನಗೆ ಇನ್ನು ಪ್ರಾಣದಿಂದ ಪ್ರಯೋಜನ ವೇನು ? ನಾನು ಯಾರಿಗೋಸ್ಕರ ಬದುಕಿರಬೇಕೋ ಅವರಿಗೆ ನಾನು ಬೇಡವಾದಮೇಲೆ ನಾನಿದ್ದೇನು ಪ್ರಯೋಜನ ? ಹಾ ವಿಧಿಯೆ! ಏನು ಸುಖವನ್ನು ಅನುಭವಿಸುವುದಕ್ಕಾಗಿ, ಈ ಪಾಪಿನಿಯನ್ನು ಪ್ರೇಮಸಾಗರದಲ್ಲಿ ತೇಲಿಬಿಟ್ಟೆ ? ನಾನಾದರೋ ಪ್ರೇಮಸಾಗರದಲ್ಲಿ ಮುಳುಗಿ ಮುಳುಗಿ ಅದರೊಳಗಿರುವ ಹವಳ, ರತ್ನ, ಮುತ್ತು, ಮುಂತಾದುವುಗಳನ್ನು ಕಣ್ಣಾರೆ ನೋಡಿದೆನೇ ವಿನಾ ಅವುಗಳನ್ನು ಬಾಚಿಕೊಳ್ಳುವುದಕ್ಕೆ ಶಕ್ತಿಯುಳ್ಳವಳಾದೆನಲ್ಲ ! ಪ್ರಭೋ ! ನನಗೆ ಈ ರತ್ನಭಾಂಡಾಗಾರವನ್ನು ಏತಕೆ ತೋರಿಸಬೇಕು ? ತೋರಿಸಿ ಅದು ನನಗೆ ಲಭ್ಯವಿಲ್ಲದಂತೆ ಮಾಡಬೇಕೇತಕೆ ? ಹೇ ದಯಾಮಯ! ನನಗೆ ಆಶೆಯನ್ನು ತೋರಿಸಿ, ಅದಕ್ಕೆ ಬೆಂಕಿಯಿಡಬಹುದೆ ? ಕೊಟ್ಟು ಕಿತ್ತುಕೊಳ್ಳುವುದಕ್ಕಿಂತಲೂ ಕೊಡದಿರುವುದು ಮೇಲ ಲ್ಲವೆ ? ನಿನಗೆ ನನ್ನಂತಹ ಮಗಳೊಬ್ಬಳು ಇದ್ದಿದ್ದರೆ ನನ್ನ ಸಂಕಟವು ನಿನಗೆ ಗೋಚರವಾಗುತ್ತಿದ್ದಿತು.

ಹೇ ಜಗದೀಶ ! ನಿನಗೆ ಅಡ್ಡಿಯಾರು ? ನಿನಗೆ ತೋರಿಬಂದ ಬಗೆಗಳಲ್ಲೆಲ್ಲಾ ನನ್ನನ್ನು ಹಿಂಸಿಸು. ನಾಳೆಯ ದಿನ ನಾನು ಆತ್ಮ ಹತ್ಯೆಯನ್ನು ಮಾಡಿಕೊಂಡರೆ, ಆಗ ನಿನ್ನ ಅತ್ಯಾಚಾರ ವೆಲ್ಲಿರು ವುದು ? ನಾನು ಬದುಕಿರುವವರೆಗೂ ನಿನಗೆ ಸಂಕಟ, ನಾನು ಸತ್ತೆನೆಂದರೆ ? ನಾನು ಸಾಯುವುದೇನೋ ನಿಜ, ಆದರೆ ಬಾದು

ಸಲ ಅವರನ್ನು ನೋಡಿ ಮಾತನಾಡಿ ಸಾಯಬೇಕು. ಅವರನ್ನು ನೋಡದೇ ಸಾಯಲು ನನಗೆ ಇಷ್ಟವಿಲ್ಲ.

ವಿನೋದಿನಿಯು ಹೀಗೆ ಚಿಂತಿಸಿ, ಅಲ್ಲಿಂದೆದ್ದು ಸುತ್ತಲೂ ನೋಡಿ ಕಾಲನ್ನು ಮುಂದಕ್ಕೆ ತೆಗೆದಿಟ್ಟಳು. ಮತ್ತೆ ನಿಂತಳು. ಪುನಃ ಹಿಂತಿರುಗಿ ಬಂದಳು. ಬಳಿಕ 'ಭಯವೇನು ? ಅವರು ನನ್ನನ್ನು ನೋಡಲು ಬೇಡ, ನಾನು ಅವರನ್ನು ನೋಡುವುದಕ್ಕೆ ಅಡ್ಡಿಯೇನು ? ಎಂದು ಮುಂದೆ ಹೊರಟಳು.

ಶರಚ್ಚಂದ್ರನಿದ್ದ ಕೋಣೆಯು ಸಮೀಪವಾಯಿತು. ವಿನೋದಿನಿಯು ಅದರ ಹತ್ತಿರಕ್ಕೆ ಬಂದು ನೋಡಿದಳು. ಕೋಣೆಯಲ್ಲಿ ದೀಪವು ಉಜ್ಜ್ವಲವಾಗಿ ಉರಿಯುತ್ತಿದ್ದಿತು. ಶರಚ್ಚಂದ್ರನು ಮೊದಲಿನಂತೆಯೇ ತಿರುಗಾಡುತ್ತಿರುವನು. ವಿನೋದಿನಿಯು ಕಿಟಕಿಯ ಮೂಲಕ ತನ್ನ ಪ್ರಾಣಕಾಂತನ ಮುಖಶ್ರೀಯನ್ನು ನೋಡಿ ಕೈಕಾಲುಗಳಲ್ಲಿ ತ್ರಾಣವಿಲ್ಲದೆ ಅಲ್ಲಿಯೇ ಕುಳಿತುಬಿಟ್ಟಳು. ಮತ್ತೆ ಚೇತರಿಸಿಕೊಂಡೆದ್ದು, ದೂರದಿಂದಲೇ ಶರತ್ತನ್ನು ನೋಡಿ, 'ಪ್ರಾಣಕಾಂತ ! ಮೊದಲು ಮೊದಲು ನಿನ್ನಲ್ಲಿಗೆ ಬರುವುದಕ್ಕೆ ನನ್ನ ಹೃದಯವು ಆದರದಿಂದ ಕುಣಿದಾಡುತ್ತಿದ್ದಿತು. ಈಗಲಾದರೋ ಭಯದಿಂದ ಹಿಂಜರಿಯುವುದು. ಭಯವೆಂದರೇನು ? ಅವಮಾನಕ್ಕಾಗಿ ಭಯಪಡಲೆ ! ಅಥವಾ ಅನಾದರಣೆಯಿಂದ ಭಯವೋ ? ನಾಥ ! ನಿನ್ನ ಚರಣಪ್ರಾಂತದಲ್ಲಿ ನನಗೆ ಅವಮಾನವೆಲ್ಲಿಯದು ? ಅನಾದರಣೆಯೆಲ್ಲಿಯದು? ನಿನ್ನ ಸಂತೋಷವೇ ನನ್ನ ಜೀವನದ ವ್ರತ. ಈಗ ದೈವಯೋಗದಿಂದ—ಅಲ್ಲ ಅಲ್ಲ—ನನ್ನ ಪಾಪಶೇಷದಿಂದ ಇಂತಹ ಪರಿವರ್ತನೆಯುಂಟಾಗಿರುವುದು. ಆ ಕಾರಣದಿಂದ ನಾನು ಈ ಪಾಪದೇಹವನ್ನು ತ್ಯಾಗಮಾಡಬೇಕೆಂದಿರುವೆನು. ಇಂದಿಗೆ ನನ್ನ ವ್ರತವೆಲ್ಲವೂ ಮುಗಿದು ಹೋಗುವುದು. ಈಗ ನನಗೆ ಯಾರಿಂದಲೂ ಭಯವೆಂಬುದೇ ಇಲ್ಲ.

ಎಂದು ತನ್ನಲ್ಲಿ ತಾನೇ ಮಾತನಾಡುತ್ತಾ, ಕೆಲವು ಪಕ್ಷಿಗಳನ್ನು ಮುಂದಿಟ್ಟು ಕಣ್ಣು ತುಂಬಾ ಶರತ್ತನ್ನು ನೋಡಿ ನೋಡಿ, ಹೇ ಭಗವಂತ ! ಈ ರತ್ನವು ನಿನ್ನಿಂದಲೇ ಸೃಷ್ಟವಾಯಿತು. ಇದನ್ನು ನೋಡಿ ನೀನು ನಿರ್ದಯನೆಂದು ಯಾರು ತಾನೇ ಹೇಳಬಲ್ಲರು ? ಒಂದು ದಿನವಾದರೂ ನಾನು ಈ ರತ್ನವನ್ನು ಹೃದಯದಲ್ಲಿ ಧಾರಣಮಾಡಿ ಸುಖಪಟ್ಟೆನು. ಈ ನನ್ನ ಸೌಭಾಗ್ಯವು ಸಾಮಾನ್ಯವಾದುದೆ ? ಈ ಸೌಭಾಗ್ಯವನ್ನು ಬಹಳ ಕಾಲ ಅನುಭವಿಸುವುದು ಈ ಜನ್ಮದಲ್ಲಿ ನನಗೆ ಲಭ್ಯವಿಲ್ಲ. ಚಿಂತೆಯಿಲ್ಲ. ಜನ್ಮಜನ್ಮಾಂತರದಲ್ಲಿಯೂ, ಈ ನನ್ನ ಪತಿಯ ಚರಣ ಸೇವೆಯು ನನಗೆ ಲಭಿಸುವಂತೆ ದಯಪಾಲಿಸು. ಇದೇ ನನ್ನ ಚರಮ ಪ್ರಾರ್ಥನೆ, ಎಂದು ಪರಮಾತ್ಮನನ್ನು ಪ್ರಾರ್ಥಿಸುತ್ತಿರುವಲ್ಲಿ, ಶರಚ್ಚಂದ್ರನು ಬೇಸತ್ತು ತಂಗಾಳಿಯನ್ನು ಸೇವಿಸಲೋಸುಗ ಕೋಣೆಯಿಂದ ಹೊರಗೆ ಬಂದನು. ದೂರದಲ್ಲಿದ್ದ ವಿನೋದಿನಿಯು ಸಡಗರದಿಂದೆದ್ದು, ಕಡೆಯ ಸಲ ಹೃದಯೇಶನನ್ನು ಕಂಡು ಆತನ ಪಾದಗಳಿಗೆರಗಿ ಒಂದೆರಡು ಮಾತುಗಳನ್ನಾಡುವೆನು. ಆಡಿಯೇ ಆಡುವೆನು. ಅಕಟ ! ಮನವು ಮುಂದರಿದರೂ ಕಾಲು ಹಿಂಜರಿಯುವುದಲ್ಲ ! ಇರಲಿ, ನಾನಿದ್ದಲ್ಲಿಗೆ ಅವರು ಬರುವವರೆಗೂ ಸುಮ್ಮನಿದ್ದು ಬಳಿಕ ನಾನೇ ಮಾತನಾಡಿಸುವೆನು, ಎಂದು ಆಲುಗಾಡದೆ ಇದ್ದಲ್ಲಿಯೇ ನಿಂತಳು. ಶರಚ್ಚಂದ್ರನಾದರೋ ಸಮೀಪದಲ್ಲಿಯೇ ಶತಪಥ ತಿರುಗುತ್ತಿದ್ದನು, ಇದನ್ನು ನೋಡಿ ವಿನೋದಿನಿಯು, ಪ್ರಾಣನಾಥ ! ನೀನು ಸುಖವಾಗಿರು. ನನಗಾಗಿ ನೀನು ಚಿಂತಿಸಬೇಡ. ನನ್ನಿಂದ ನಿನಗೆ ದುಃಖವುಂಟಾಗುವ ಹಾಗಿದ್ದರೆ, ನನ್ನನ್ನು ಮನೋವಾಕ್ಕಾಯಗಳಿಂದಲೂ ದೂರಮಾಡು. ಬಳಿಕ ನನ್ನ ಹಣೆಯಲ್ಲಿ ಬರೆದಂತಾಗಲಿ. ಈ ಜನ್ಮದಲ್ಲಿ ಇಲ್ಲವಿದ್ದರೆ ಕೆಡತು, ಮುಂದಿನ ಜನ್ಮಗಳಲ್ಲಾದರೂ ನಿನ್ನ ಚರಣಪ್ರಾಂದಲ್ಲಿ ಕೊಂಚ ಸ್ಥಳವನ್ನು ದಯಪಾಲಿಸು, ಎಂದು ಯೋಚಿಸು.

ತ್ತಿರುವಲ್ಲಿ, ಶರಚ್ಚಂದ್ರನು ಪುತ್ತೆ ಕೋಣೆಯೊಳಗೆ ಹೊರಟುಹೋದನು. ಇವನ್ನು ನೋಡಿ ವಿಶೋಧಿನಿಯು ಮುಚ್ಚಿಯಾಗಿ, ಅಯ್ಯೋ ಅಮ್ಮ ! ಎಂದು ಗಟ್ಟಿಯಾಗಿ ಅರಚಿ ನೆಲವನ್ನೋಲೆ ಬಿದ್ದು ಬಿಟ್ಟಳು.

ಶರಚ್ಚಂದ್ರನು ಆವುದೋ ಪೂರ್ವಪರಿಚಿತವಾದ ಧ್ವನಿಯು ಕೇಳಬರುವುದೆಂದು ಕಿಟಕಿಯಲ್ಲಿ ತಲೆಯಿಟ್ಟು ನೋಡಿದನು. ಕತ್ತಲೆಯಲ್ಲಿ ಯಾವುದೂ ಕಾಣದಿರಲು, ಇದು ಅವ್ಯವಸ್ಥಿತವಾದ ಮನಸ್ಸಿನ ವಿಕಾರವೇ ಹೊರತು, ಧ್ವನಿಯೂ ಅಲ್ಲ, ಗಿನಿಯೂ ಅಲ್ಲ, ಎಂದು ಬೇರೆಯ ಕಡೆಗೆ ತಿರುಗಿಕೊಂಡು ಚಿಂತಾಸಾಗರದಲ್ಲಿ ಮುಳುಗಿದನು.



## ಹದಿಮೂರನೆಯ ಸಂಧಿ.

### ತಿ ರ ಸ್ಕಾ ರ .

ಕಾರಣವೇನಾದರೂ ಇರಲಿ, ಶರಚ್ಚಂದ್ರನಾದರೋ ಕೇವಲ ಕಾತರನಾದನು. ಆವುದರಿಂದ ಈ ಗುರು ಯಾತನೆಯು ನಿವಾರಣೆಯಾಗುವುದು, ಆವುದರಿಂದ ವಿಶ್ವಾಸಘಾತುಕತೆಗೆ ಪ್ರತೀಕಾರವುಂಟಾದೀತು, ಎಂಬುದೇ ಅವನ ಯಾತನೆಗೆ ಮೂಲಕಾರಣವಾಗಿದ್ದಿತು. ಮನೋರೋಗಕ್ಕೆ ಸರಿಯಾದ ಔಷಧ ಕೊಡತಕ್ಕ ವೈದ್ಯಶಿಖಾಮಣಿಯು ಯಾರಿರುವರು ? ಇರುವರು. ಮನೋವ್ಯಥೆಗೆ ಅಗ್ನಿ ಚಿಕಿತ್ಸೆಗಿಂತಲೂ ಬೇರೊಂದಾದ ಉಪಾಯವಿಲ್ಲ. ಶರಚ್ಚಂದ್ರ ! ನಿನ್ನ ರೋಗಮೂಲವಾದ ಆಧಿಗೆ ಅಗ್ನಿಸಂಸ್ಕಾರವೇ ಸಿದ್ಧೌಷಧ. ನೀನು ಇನ್ನೂ ತಡಮಾಡುವುದಾದರೆ, ಆಧಿಯೇ ಅಗ್ನಿಯಂತೆ ನಿನ್ನನ್ನು ಸುಟ್ಟು ಬೂದಿ ಮಾಡಿಬಿಡುವುದು. ಈ ರೀತಿಯಲ್ಲಿ ಬದುಕಿರುವುದಕ್ಕಿಂತಲೂ ನಿನಗೆ ಮರಣವೇ ಶ್ರೇಯಸ್ಸು. ಶರಚ್ಚಂದ್ರನು ಬಹಳವಾಗಿ ವಿಮರ್ಶೆಮಾಡಿ ಮರಣವೇ ಶರಣವೆಂದು ತಿಳಿದಿದ್ದರೂ, ವಿಶ್ವಾಸ

ಘಾತುಕತೆಗೆ ತಕ್ಕ ಶಾಸನವಾದದ್ದು ಕಣ್ಣಿನಿಂದ ನೋಡದೇ ಮರಣ ವನ್ನು ಬಯಸಲು ಇಷ್ಟು ಪತಿತಕ್ಕನನಾಗಿರಲಿಲ್ಲ.

ರಾತ್ರಿ ಸುಮಾರು ೨ ಗಂಟೆಯು ಹೋಗಿತ್ತಾಯಿತು. ರಂಗ ಪುರವು ಜನಶೂನ್ಯವಾದ ಪಟ್ಟಣದಂತೆ ನಿಶ್ಶಬ್ದವಾಗಿದ್ದಿತು. ನಿದ್ರಾ ಶಕ್ತಿಯಿಂದ ಅಂತರ್ಬಹಿಶ್ಚ ಜಗತ್ತು ಸ್ಥಿರವಾಗಿರುವುದಾದರೂ, ಆ ಶಕ್ತಿಗೆ ಶರಚ್ಚಂದ್ರನ ಮೇಲೆ ಅಧಿಕಾರವಿರಲಿಲ್ಲ. ಏತಕ್ಕೆಂದರೆ— ಅಂತಹ ಸಮಯದಲ್ಲಿಯೂ ಶರತ್ತು ಜಾಗರಿತನಾಗಿ ಹಾಸಿಗೆಯಲ್ಲಿ ಹೊರಳಾಡುತ್ತಿದ್ದನು. ಏನು ಮಾಡಿದರೂ ಅವನಿಗೆ ಶಾಂತಿಯೇ ಉಂಟಾಗಲಿಲ್ಲ. ಅವನು ಬಹಳ ಹೊತ್ತು ಈರೀತಿಯಲ್ಲಿದ್ದು ಬಳಿಕ ಹಾಸಿಗಯಿಂದೆದ್ದು ಪೆಟ್ಟಿಗೆಯಲ್ಲಿದ್ದ ಒಂದು ಸಣ್ಣ ಕಠಾರಿಯನ್ನು ಹೊರಗೆ ತೆಗೆದನು. ಅದನ್ನು ಕೈಯಲ್ಲಿ ಹಿಡಿದುಕೊಂಡು ದೀಪದ ಬೆಳಕಿನಲ್ಲಿ ಝಳಪಿಸಿದನು. ಅದಾದಮೇಲೆ ಅದನ್ನು ಒಂದುಕಡೆ ಇಟ್ಟು ತಲೆಯಮೇಲೆ ಕೈಗಳನ್ನಿಟ್ಟುಕೊಂಡು ಬಹಳ ಹೊತ್ತು ಚಿಂತಿಸಿದನು. ಅನಂತರ ಕಠಾರಿಯನ್ನು ಮತ್ತೆ ತೆಗೆದುಕೊಂಡು ಅದನ್ನು ಮೇಲಕ್ಕೆತ್ತಿ, 'ಹಾ ದೇವ!' ಎಂದು ಹರಿನಾಮಸ್ಮರಣೆ ಯನ್ನು ಮಾಡಿದನು. ಆ ಸಮಯಕ್ಕೆ ಸರಿಯಾಗಿ ಒಬ್ಬ ಯುವತಿಯು ಅಲ್ಲಿಗೆ ಬಂದು ಶರಚ್ಚಂದ್ರನ ಎರಡು ಕೈಗಳನ್ನೂ ಬಲವಾಗಿ ಹಿಡಿದು— ಶರತ್! ಇದೇನು? ಯಾರು ಮಾಡುವ ಕೆಲಸ! ಎಂದು ಕೇಳಿದಳು.

ಯುವತಿಯು ಗಡಗಡ ನಡುಗುತ್ತಾ ಕಣ್ಣುಗಳಿಂದ ನೀರನ್ನು ಸುರಿಸುತಿದ್ದಳು. ಶರಚ್ಚಂದ್ರನು ವಿಸ್ಮಿತನಾಗಿ ಆಕೆಯು ಯಾರೆಂದು ನೋಡಲಾಗಿ ವಿಲಾಸಿನಿಯಾಗಿದ್ದಳು. ಶರತ್ತು ವಿಲಾಸಿನಿಯನ್ನು ನೋಡಿ ತನ್ನ ವ್ಯಸನವನ್ನು ಮರೆಮಾಡಿ ನಗುತ—ವಿಲಾಸ! ಇಷ್ಟು ಹೊತ್ತಿನಲ್ಲಿ ನೀನು ಇಲ್ಲಿಗೆಬರಲು ಕಾರಣವೇನು? ಎಂದು ಕೇಳಿದನು.

ಶರಚ್ಚಂದ್ರನು ನಗುತ ಮಾತನಾಡಿದನು. ಇದೊಂದು ಆಶ್ಚರ್ಯವೇ

ಸರಿ. ಘೋರವಾದ ಯಾತನೆಯಿಂದ ನಿಮಿಷಾರ್ಧದಲ್ಲಿ ನಾವು ಯಾರಿಗೆ ಮರಣವನ್ನು ಸಿದ್ಧಮಾಡಿ ನಮ್ಮ ಮನಸ್ಸನ್ನು ಪೂರ್ತಿಗೊಳಿಸಬೇಕೆಂದಿದ್ದೆವೋ, ಆತನು ನಗುವನ್ನು ತೋರ್ಪಡಿಸುತ್ತಾ ಮಾತನಾಡಿದುದು ಅದ್ಭುತವಾದುದೇ ಸರಿ. ನಗುವಿನ ಮರ್ಮವನ್ನು ಕಾಣುವರಾರು ?

ವಿಲಾಸಿನಿಯು ತಾನು ಬರುವುದು ಸಾವಕಾಶವಾದುದರಿಂದ ಶರಚ್ಚಂದ್ರನು ವಿರಹಯಾತನೆಯನ್ನು ತಡೆಯಲಾರದೆ ಆತ್ಮಹತ್ಯೆಯನ್ನು ಮಾಡಿಕೊಳ್ಳಲು ಸಿದ್ಧನಾಗಿದ್ದನೆಂತಲೂ, ತನ್ನನ್ನು ಕಂಡಕೂಡಲೆ ಆನಂದವಾಗಿ ನಗುವುದರಿಂದ ಆತನು ತನ್ನಲ್ಲಿ ಕೇವಲ ಅನುರಾಗಿಯಾಗಿರುವನೆಂತಲೂ ಯೋಚಿಸಿ ಹಿಗ್ಗಿದವಳಾಗಿ—ಶರತ್ ! ನೀನು ಇನ್ನೂ ಹುಡುಗನಲ್ಲ. ನೀನು ಮಾಡುವ ಕೆಲಸವೆಂತಹುದು ? ಒಬ್ಬ ತುಚ್ಛಳಾದ ಹುಡುಗಿಗಾಗಿ ನೀನು ಪ್ರಾಣವನ್ನು ಕಳೆದುಕೊಳ್ಳುವುದೆಂದರೇನು ? ಎಂದು ಕೇಳಿದಳು.

ಶರತ್—ಹುಡುಗಿಗಾಗಿ ನಾನು ಪ್ರಾಣವನ್ನು ಕಳೆದುಕೊಳ್ಳುವೆನೆಂದು ನಿನಗೆ ಹೇಳಿದವರಾರು ? ನಾನಿನ್ನೂ ಬಹಳವಾಗಿ ಸುಖಪಡಬೇಕೆಂದಿರುವೆನು. ನನಗಿನ್ನೂ ಆಶೆಯಿರುವುದು. ಹೀಗಿರುವಾಗ ನಾನು ಆತ್ಮಹತ್ಯೆಯನ್ನು ಏತಕೆ ಬಯಸಲಿ ?

ವಿಲಾಸಿನಿ—ಹಾಗಾದರೆ ಕಠಾರಿಯಿಂದ ಪ್ರಯೋಜನವೇನು ?

ಶರತ್—ಕಠಾರಿಯ ಕೈಗಾರಿಕೆಯನ್ನು ನೋಡಿ ಸಂತೋಷಪಡುವುದಕ್ಕಾಗಿ ಹೊರಗೆ ತೆಗದುದುಂಟು. ಸಾಯುವುದಕ್ಕೆ ನನಗೆ ಆಶೆಯಿದ್ದಿದ್ದರೆ, ನಾನು ಸತ್ತು ಎಷ್ಟೋ ಹೊತ್ತಾಗಿರಬೇಕು, ಎಂದು ಹೇಳಿ ಕಠಾರಿಯನ್ನು ದೂರಬಿಸುಟನು.

ಬಳಿಕ ವಿಲಾಸಿನಿಯು ಮಾತನಾಡಿದಳು:— ಶರಚ್ಚಂದ್ರ ! ಇದಕ್ಕೆ ಪೂರ್ವದಲ್ಲಿ ನಡೆದ ವಿಷಯವೆಲ್ಲವನ್ನೂ ನಾನು ತಿಳಿದು,

ಮುಂದೆ ಯಾವ ಅನರ್ಥಪರಂಪರೆಯೂ ಉಂಟಾಗದಿರುವುದಕ್ಕಾಗಿ ನಿನ್ನಲ್ಲಿಗೆ ನಾನು ಬಂದೆನು. ನೀನು ಮಾತ್ರ ಆ ವ್ಯಸನವನ್ನು ಮನ ದಲ್ಲಿಟ್ಟು ಪ್ರಾಣಬಿಡಬೇಡ. ನಿನಗಿನ್ನೂ ಚಿಕ್ಕವಯಸ್ಸು. ಅದರಲ್ಲಿ ಯೂ ಪೂರ್ಣಯೌವನ. ನಿನ್ನ ರೂಪವಾದರೋ ಭುವನಮೋಹನ ವಾದುದು. ನಿನ್ನ ಗುಣಗಳು ದೇವತೆಗಳಿಗೂ ದುರ್ಲಭ. ನಿನ್ನಲ್ಲಿ ಅಸಾಧಾರಣ ಗುಣಗಳಿರುವುದರಿಂದ ಜಗತ್ತು ನಿನ್ನ ವಶದಲ್ಲಿರುವುದು. ಯಾವ ಹೆಂಗಸು ತಾನೇ ನಿನ್ನ ರೂಪವನ್ನು ನೋಡಿ ಮೈಮರೆಯು ದಿರಳು.

ವಿಲಾಸಿನಿಯು ಹೀಗೆ ಹೇಳಿ ಪ್ರೇಮಪೂರಿತನಾದ ದೃಷ್ಟಿ ಯಿಂದ ಶರತ್ತನ್ನು ನೋಡಿದಳು. ಶರತ್ತು ಆಕೆಯನ್ನು ಕ್ಷಣಕಾಲ ನೋಡಿ ನಕ್ಕನು. ಇಬ್ಬರ ಕಣ್ಣುಗಳೂ ಪರಸ್ಪರ ಸೇರಿದುವು. ಇದ ರಿಂದಲೇ ವಿಲಾಸಿನಿಯು ಉಬ್ಬಿದವಳಾಗಿ, ಶರತ್ತು ತನ್ನಲ್ಲಿ ಮೋಹಿತ ನಾಗಿರುವನೆಂದು ತಿಳಿದು, ಮುಗುಳುನಗೆಯಿಂದ ಇಂತೆಂದಳು:— ಶರಚ್ಚಂದ್ರ ! ಸುಖಕ್ಕೋಸ್ಕರವಾಗಿಯೇ ಈ ಸಂಸಾರವಿರುವುದು. ದುಃಖಗಳು ಬಂದಮಾತ್ರಕ್ಕೆ ನಾವು ಕೊರಗಬೇಕಾದ ಕಾರಣವಿಲ್ಲ. ದುಃಖವನ್ನು ದೂರಮಾಡಿ ಸುಖವಾವುದೆಂಬುದನ್ನು ನಾವು ಪದೇಪದೇ ಕಂಡುಹಿಡಿಯುತ್ತಿರಬೇಕು. ಅನೇಕರಿಗೆ ಇವರ ತತ್ತ್ವವು ಗೊತ್ತಾ ಗಿರಲಿಕ್ಕಿಲ್ಲ. ಕೆಲವರು ಸುಖವನ್ನೇ ದುಃಖವನ್ನಾಗಿ ಮಾಡಿಕೊಂಡು ಕೊರಗಿ ಸಾಯುವರು. ಅಂತಹವರಿಗೆ ಸುಖದುಃಖಗಳ ಪರಿಜ್ಞಾನವೇ ಇಲ್ಲ. ದುಃಖವನ್ನೇ ಸುಖವೆಂದು ತಿಳಿದ ಮಹನೀಯರೇ ಈ ಪ್ರಪಂಚ ದಲ್ಲಿ ಚಿರಕಾಲ ಬಾಳತಕ್ಕವರು. ನೀನು ಮಾತ್ರ ಇಲ್ಲದ ದುಃಖ ವನ್ನು ಕಟ್ಟಿಕೊಂಡು ಅಳುವುದುನೋಡಿದರೆ ಆಶ್ಚರ್ಯವಾಗುವುದು.

ಅದಕ್ಕೆ ಶರಚ್ಚಂದ್ರನು ಉತ್ತರ ಕೊಟ್ಟನು:—ವಿಲಾಸ ! ನೀನು ಹೇಳುವುದೆಲ್ಲವೂ ನಿಜ. ನಾನಾದರೋ ನನ್ನ ಸುಖದುಃಖ

ವೆಲ್ಲವನ್ನೂ ನಿನ್ನಲ್ಲಿ ಸಮರ್ಪಣವಾಡಿರುವೆನು. ಯಾವ ಮಾರ್ಗ ದಲ್ಲಿ ಹೋಗಬೇಕೆಂದು ನೀನು ಅಪ್ಪಣೆಮಾಡಿದರೂ, ನಾನು ಅದ ರಂತೆಯೇ ನಡೆದುಕೊಳ್ಳಲು ಸಿದ್ಧನಾಗಿರುವೆನು.

ಮತ್ತೆ ವಿಲಾಸಿನಿ ಹೇಳಿದುದು:—ಸ್ತ್ರೀಪುರುಷರ ಪರಸ್ಪರ ಸ್ನೇಹಕ್ಕೆ ಅನುರಾಗವೆನ್ನುವರು. ಸ್ತ್ರೀಯು ಪುರುಷನನ್ನೂ, ಪುರು ಷನು ಸ್ತ್ರೀಯನ್ನೂ ಪ್ರೀತಿಸುವುದು ಪ್ರಕೃತಿಯ ನಿಯಮವೇ ಆಗಿರು ವುದು. ಪ್ರೀತಿಗೆ ಭೇದಾಭೇದಗಳಿಲ್ಲವೆಂಬುದನ್ನು ನೀನೇ ಬಲ್ಲೆ. ಸ್ವಭಾವಸಿದ್ಧವಾದ ಪ್ರೀತಿಯ ಮೇಲೆ ಸಮಾಜಕ್ಕೆ ಕೊಂಚವೂ ಅಧಿ ಕಾರವಿಲ್ಲವೆಂಬುದು ಯಾರಿಗೆ ತಾನೇ ತಿಳಿಯದ ವಿಷಯವಾಗಿರುವುದು. ಸಮಾಜದವರಿಗೆ ಹೆದರುವುದಕ್ಕೆ ಮೊದಲು ಮಾಡಿದರೆ, ಲೋಕದಲ್ಲಿ ಪ್ರೀತಿಗೆ ಸ್ಥಾನವೇ ಇಲ್ಲದಂತಾಗುವುದು. ಬಳಿಕ ಪ್ರೀತಿಯು ರೂಪಾಂತರವನ್ನು ತಾಳಿ ಲೋಕವನ್ನೇ ಸುಟ್ಟು ಬೂದಿಮಾಡಿಬಿಡು ವುದು. ಹಿತವಾದ ಪ್ರೇಮದ ಪರಿಣಾಮವು ಹೀಗೆಯೇ ಸರಿಯೆಂದು ತಿಳಿಯಲಸದಳವು.

ಶರಚ್ಚಂದ್ರನು ವಿಲಾಸಿನಿಯ ಮನೋಗತವನ್ನು ಕೊಂಚದೂರ ತಿಳಿದವನಾಗಿ ಪ್ರಕೃತಕಾರ್ಯದಲ್ಲಿ ವಿಲಾಸಿನಿಯು ತನಗೆ ಸಹಾಯ ಳಾದಾಳೆಂಬ ಭರವಸೆಯಿಂದ ಮಾತನಾಡಿದನು:—ವಿಲಾಸ ! ಪ್ರೇಮ ವೆಂಬುದು ನಾನಾವಿಧ. ಪ್ರೇಮವಿರುವುದೆಂದು ಹೇಳಿದ ಮಾತ್ರಕ್ಕೆ ನಂಬಬೇಕಾದುದೇನೂ ಇರುವುದಿಲ್ಲ. ಯಾವ ಪ್ರೇಮದಿಂದ ನರಕವು ಸ್ವರ್ಗವಾಗುವುದೋ, ಪಾಪವು ಪುಣ್ಯವಾಗುವುದೋ, ನಿರ್ಧನನು ಧನವಂತನಾಗುವನೋ, ದುಃಖವು ಸುಖವಾಗುವುದೋ, ಅದೇ ಸಹಜ ವಾದ ಪ್ರೇಮ. ಯಾವ ಪ್ರೇಮಾವಿರ್ಭಾವದಲ್ಲಿ ಜ್ಞಾನಶಕ್ತಿಯೂ, ಬುದ್ಧಿಶಕ್ತಿಯೂ, ವಿವೇಚನಾಶಕ್ತಿಯೂ ಸಂಪೂರ್ಣವಾಗಿ ಲುಪ್ತ ವಾಗಿ ಹೋಗುವುದೋ ಅದೇ ಸ್ವೈಜವಾದ ಪ್ರೇಮದ ಸಾರ. ವಿಲಾಸ!

ನೀನು ' ಪ್ರೇಮ, ಪ್ರೇಮ ' ಎಂದು ಹೇಳುತ್ತಿರುವೆಯಲ್ಲ, ಅದೆಂತಹ ಪ್ರೇಮ ?

ವಿಲಾಸಿನಿ—ನನ್ನ ಪ್ರೇಮವನ್ನು ಹೇಗೆ ತೋರಿಸಲಿ ? ಯಾವ ಉಪಮಾನದಿಂದ ನಿನಗೆ ಪ್ರೇಮದ ಅರ್ಥವನ್ನು ತಿಳಿಯಪಡಿಸಲಿ. ಪ್ರೇಮವನ್ನು ವಿವರಿಸುವುದಕ್ಕೆ ನನ್ನ ಮಾತುಗಳೇ ಸಾಲವು.

ಶರತ್—ಹಾಗಾದರೆ ನಿನ್ನ ಪ್ರೇಮವು ಉಚ್ಚವಾದುದೇ ಸರಿ. ಸ್ತ್ರೀಪುರುಷರಲ್ಲಿಯೂ ಈರೀತಿಯಾದ ಉಚ್ಚಪ್ರೇಮವಿದ್ದರೆ ಅದು ಶುದ್ಧವೆನಿಸುವುದು. ಅದರಿಂದಲೇ ಶುದ್ಧವಾದ ಸುಖವುಂಟಾಗುವುದು, ಅಲ್ಲವೇ ? ವಿಲಾಸ !

ವಿಲಾಸಿನಿಯು ದಿಕ್ಕುತೋರದವಳಾಗಿ ತಲೆಯನ್ನು ಬಗ್ಗಿಸಿ ನಿಂತಳು. ಅವಳ ಅಂತರ್ಯವಾದ ಸಂಕಟವು ಬಹಿಃ ಪ್ರಕಾಶಿತವಾಗುತ್ತಿದ್ದಿತು. ಇದನ್ನು ನೋಡಿ, ಶರಚ್ಚಂದ್ರನು ವಿಲಾಸಿನಿಗೆ ಪ್ರೇಮಲಾಲಸೆಯು ತಲೆಮೀರಿ ಹೋಗಿರುವುದು. ಈ ಸಮಯದಲ್ಲಿ ಆಕೆಯನ್ನು ಸಮಾಧಾನಪಡಿಸುವುದು ಸಹಜಧರ್ಮವೆಂದು ತಿಳಿದು—ವಿಲಾಸ ! ಉಭಯಪಕ್ಷದಲ್ಲಿಯೂ ಸಮಾನವಾದ ಪ್ರೇಮವಿದೆಯೆಂದು ಒಪ್ಪಿದರೂ ಒಪ್ಪೋಣ, ಆದರೆ ಸಮಾಜವು ಅದನ್ನು ಒಪ್ಪಬೇಕಲ್ಲವೆ? ಎಂದನು.

ವಿಲಾಸಿನಿ—ಅದು ಸಾಧ್ಯವೆ ? ಶರಚ್ಚಂದ್ರ, ಅದು ಸಾಧ್ಯವೆ ?

ಶರತ್—ಮನುಷ್ಯಲೋಕದಲ್ಲಿ ಪ್ರೇಮದ ಸ್ಥಾನಾಸ್ಥಾನಗಳು ಸಮಾಜದಿಂದಲೇ ಇತ್ಯರ್ಥವಾಗಬೇಕು. ಸಮಾಜವೇ ನ್ಯಾಯಾನ್ಯಾಯಗಳನ್ನೂ, ಗುಣಾಗುಣಗಳನ್ನೂ, ಉಚ್ಚನೀಚಗಳನ್ನೂ ನಿರ್ಧರಿಸುವುದು.

ವಿಲಾಸಿನಿ—ಇದರಿಂದ ದೈವವ್ಯಾಪಾರವು ಸರಿಯಾಗಿ ನಡೆಯಲಾರದು. ಮನುಷ್ಯನು ಸ್ವಾರ್ಥಪರಾಯಣನು. ಸಮಾಜವಾದರೋ

ಲೋಕದ ಪುರೋವೃದ್ಧಿಯಲ್ಲಿ ಅಡ್ಡಿಯು. ಧರ್ಮಶಾಸ್ತ್ರವು ಸ್ತ್ರೀಯರಿಗೆ ಯಾವಾಗಲೂ ಕಂಟಕಸ್ವರೂಪವು. ಹೀಗಿರುವಲ್ಲಿ ಪ್ರೇಮವು ಸ್ವೇಚ್ಛೆಯಾಗಿ ಬಳೆಯಲು ಅವಕಾಶವೆಲ್ಲಿಯದು ?

ಶರಚ್ಚಂದ್ರನು ಈಮಾತಿಗೆ ಯಾವ ಉತ್ತರವನ್ನೂ ಕೊಡದೇ ಕೋಣೆಯಲ್ಲಿ ತಿರುಗಾಡಲಾರಂಬಿಸಿದನು. ವಿಲಾಸಿನಿಯು ತನ್ನ ಮನದ ಉದ್ವೇಗವನ್ನು ತಡೆಯಲಾರದವಳಾಗಿ, ಶರಚ್ಚಂದ್ರನ ಚರಣಗಳಮೇಲೆ ಬಿದ್ದು—ಪ್ರಭೋ ! ನನ್ನನ್ನು ಕಾಪಿಡು, ಕಾಪಿಡು, ನಾನು ನಿನ್ನ ಪ್ರೇಮಕ್ಕೆ ದಾಸಿ. ನಾನು ನಿನ್ನನ್ನು ಸರ್ವಭಾವದಿಂದಲೂ ಪ್ರೀತಿಸುವೆನು. ನನ್ನನ್ನು ಕಾಪಿಡು, ಕಾಪಿಡು, ಎಂದು ಹೇಳಿ ಸುಮ್ಮನಾದಳು.

ಶರಚ್ಚಂದ್ರನು ಇವೆಲ್ಲವನ್ನೂ ನೋಡಿ ಇತಿಕರ್ತವ್ಯತಾಮೂಢನಾಗಿ ಚಿಂತಿಸುತ್ತಾ ನಿಂತುಬಿಟ್ಟನು. ಅವನ ಪಾದಗಳೆರಡೂ ವಿಲಾಸಿನಿಯ ಬಿಸಿಯಾದ ಕಣ್ಣೀರುಗಳಿಂದ ನೆನೆಸಲ್ಪಟ್ಟವು. ಒಂದು ಕ್ಷಣಕಾಲಾನಂತರ ಶರಚ್ಚಂದ್ರನು ಪುರುಷನಂತೆ ಧೈರ್ಯವನ್ನು ತಾಳಿ—ವಿಲಾಸಿನಿ ! ಎದ್ದು ಹೊರಡು. ಅಪಾತ್ರದಲ್ಲಿ ನೀನು ಪ್ರಣಯವನ್ನು ಸ್ಥಾಪಿಸಲು ಯತ್ನಿಸಿರುವೆ. ನಿನ್ನ ಆಶೆಯು ನನ್ನಲ್ಲಿ ಎಂದಿಗೂ ಫಲಿಸುವುದಿಲ್ಲ. ನಿನ್ನ ಹೃದಯವನ್ನು ಶಾಂತವನ್ನಾಗಿ ಮಾಡಿಕೋ ವೃಥಾ ಉಭಯಲೋಕ ವಿಭ್ರಷ್ಟಳಾಗಬೇಡ, ಎಂದು ಗದರಿಸಿ ಬುದ್ಧಿಹೇಳಿದನು.

ವಿಲಾಸಿನಿಯು ಹಿಡಿದಕಾಲನ್ನು ಬಿಡದಿರಲು, ಶರತ್ತು ತಾನೇ ಬಿಡಿಸಿಕೊಳ್ಳಲು ಯತ್ನಮಾಡಿದನು. ಆಗ ವಿಲಾಸಿನಿಯು ಮೂರ್ಛೆಹೋಗಿದ್ದಳು. ಇದನ್ನು ನೋಡಿ ಶರತ್ತು ಭೀತಿಗೊಂಡು ದಡಬಡನೆ ಆಕೆಗೆ ಶೈತ್ಯೋಪಚಾರ ಮಾಡಿದನು. ಬಳಿಕ ವಿಲಾಸಿನಿಗೆ ಜ್ಞಾನೋದಯವಾಯಿತು. ವಿಲಾಸಿನಿಯು ಕೊಂಚಹೊತ್ತು ಅಲ್ಲಿಯೇ

ಇದ್ದು ಭಾರವಾದ ಮನಸ್ಸಿನಿಂದ ಬೇರೊಂದು ಕೋಣೆಗೆ ಹೊರಟಳು. ಹೊರಗಡೆ ಹರಮಣಿಯು ಇದೆಲ್ಲವನ್ನೂ ನೋಡುತ್ತಾ ನಿಂತಿದ್ದಳು. ವಿಲಾಸಿನಿಯು ಆಕೆಯನ್ನು ನೋಡಿ—ಹರ! ನನ್ನ ಆಶೆಯು ನಿಷ್ಫಲವಾಯಿತು, ನಾನಿನ್ನು ಬದುಕಿರಲಾರೆನು, ಎನಲಾಗಿ, ಹರಮಣಿಯು—ಹರಮಣಿಯು ಬದುಕಿರುವ ವರೆಗೂ ಆಶೆಯು ನಿಷ್ಫಲವಾಗುವುದೆಂದರೇನು ? ಎಂದು ಹೇಳಿದಳು.

ವಿಲಾಸಿನಿ—ಇನ್ನೇನುಪಾಯವಿರುವುದು ?

ಹರ—ಇರುವುದು. ಕೊನೆಯ ಉಪಾಯವೊಂದಿರುವುದು. ಅದನ್ನು ನಾಳೆಯದಿನ ನಿನಗೆ ತೋರಿಸುವೆನು.

ಇಬ್ಬರೂ ಹೊರಟುಹೋದರು.

---

## ಹದಿನಾಲ್ಕನೆಯ ಸಂಧಿ.

### (ವಿವೇಕೋದಯ)

ಪ್ರಾತಃಕಾಲದಲ್ಲಿ ಶರಚ್ಚಂದ್ರನು ಮನೆಯಮುಂದೆ ತಿರುಗಾಡುತಿದ್ದನು. ಅವನಿಗೆ ರಾತ್ರಿಯೆಲ್ಲಾ ನಿದ್ರೆಯೇ ಇಲ್ಲದ್ದರಿಂದ ಕಣ್ಣುಗಳು ಕೆಂಪಾಗಿದ್ದವು, ಮುಖವು ಕಪ್ಪಾಗಿದ್ದು ಬಾಡಿಹೋಗಿದ್ದಿತು. ಶರೀರದಲ್ಲಿ ಬಲವಿಲ್ಲದ್ದರಿಂದ ಅವನು ಮದ್ಯಪಾಯಿಯಂತೆ ತೂಗಾಡುತ್ತಾ ಏನೇನೋ ಯೋಚಿಸುತಿದ್ದನು:—

ಇಂದಿರೇಶನು ವಿನೋದಿನಿಯ ಪಾತಿವ್ರತ್ಯವನ್ನು ಲೋಪಮಾಡಿದನಾದುದರಿಂದ, ಅವನನ್ನು ಖೂನಿ ಮಾಡಬೇಕು. ಅಥವಾ ಅವನ ತಪ್ಪೇನು ? ವಿಶ್ವಾಸಘಾತಿನಿಯಾದ ವಿನಿಯೇ ಇದಕ್ಕೆಲ್ಲ ಮೂಲಕಾರಣಳಾದ್ದರಿಂದ, ಅವಳನ್ನು ಮೊದಲು ಧ್ವಂಸಮಾಡಿ ಬಿಡಬೇಕು. ಇವರನ್ನು ಧ್ವಂಸಮಾಡುವುದಕ್ಕೆ ನಾನುಯಾರು ? ಪಾಪೋಚಿತವಾದ ದಂಡವನ್ನು ವಿಧಿಸುವುದಕ್ಕೆ ಜಗನ್ನಿಯಾಮಕನಿಲ್ಲವೆ ? ಸರ್ವ

ಭಾರವನ್ನೂ ಆತನು ವಹಿಸಿರುವಾಗ ನಾನೇತಕೆ ಕಲಂಕಿತನಾಗ ಬೇಕು ? ನಾನು ಮಾನವ ಲೀಲೆಯನ್ನು ತ್ಯಾಗಮಾಡಿದರೆ, ಎಲ್ಲವೂ ತನಗೆತಾನೇ ಶಾಂತವಾಗುವುದು. ನನಗಾದರೋ ಈ ಸಂಸಾರದಲ್ಲಿ ಇನ್ನು ಸುಖವಿಲ್ಲ. ನಾನು ಸಂಸಾರವನ್ನು ತ್ಯಾಗಮಾಡುವೆನು. ಆದರೆ ಈ ಯಾತನೆಯನ್ನು ನಾನು ತ್ಯಾಗಮಾಡುವುದು ಹೇಗೆ ? ನಾನು ಬಿಟ್ಟರೂ ಅದುಮಾತ್ರ ಬಿಡದು. ಅವರ ಸ್ಮೃತಿಯಿರುವ ವರೆಗೂ ನಾನು ಸುಖಿಯಲ್ಲ. ಹಾಗಾದರೆ ಉಪಾಯವೇನು ? ನನಗೆ ಮರಣವೇ ಶರಣ. ನಾನು ಸತ್ತಲ್ಲದೇ ಈ ಬೆಂಕಿಯು ಆರಿಹೋ ಗುವುದಿಲ್ಲ. ನಾನು ಸಾಯುವುದೇನೋ ನಿಜ. ಆದರೆ ವೈರನಿರ್ಯಾತನೆ ಯಾಗಲಿಲ್ಲನೆಂಬ ಕೊರತೆಯ ಸಂಸ್ಕಾರವು ನನ್ನ ಆತ್ಮಕ್ಕೆ ಅಂಟಿ ಕೊಂಡೇ ಇರುವುದು. ಆದುದರಿಂದ ನಾನು ಮೊದಲು ಸತ್ತರೂ ಪ್ರಯೋಜನವಿಲ್ಲ ಪ್ರಯೋಜನವಿಲ್ಲ. ನಾನು ಸಾಯುವುದಕ್ಕೆ ಮೊದಲು ಅವರಿಬ್ಬರನ್ನೂ ತೀರಿಸಿಬಿಡುವೆನು. ನಾನು ಸಾಯು ವುದೇವುಂಟು. ಮರಣಕಾಲದಲ್ಲಿ ನನ್ನ ಆತ್ಮಕ್ಕೆ ತೃಪ್ತಿಯಾದರೂ ಇರಲಿ. ನಾನು ಅವರನ್ನು ಕೊಲ್ಲುವುದೇ ಸರಿ.

ಎಂದು ಯೋಚಿಸಿ ಶರಚ್ಚಂದ್ರನು ಮನೆಯಕಡೆಗೆ ಬಂದನು. ಉನ್ಮತ್ತನಾದ ಶರತ್ತಿಗೆ ಇಂದಿರೇಶ ವಿನೋದಿನಿಯರ ದೇಹಶೂನ್ಯ ವಾದ ಮೂರ್ತಿಗಳು ಎಲ್ಲೆಲ್ಲಿಯೂ ಕಾಣಿಸಿಕೊಂಡು ವಿಕಟಾಟ್ಟ ಹಾಸವನ್ನು ತೋರಿಸುತ್ತಿರುವಂತೆ ಕಾಣಿಸಲಾರಂಭಿಸಿದವು. ಸ್ಥಿರ ಪ್ರತಿಜ್ಞನಾದ ಶರಚ್ಚಂದ್ರನಿಗೆ ಇದರಿಂದ ಭಯವುಂಟಾಗಲಿಲ್ಲ. ಅವನು ಹೆದರುವಹಾಗೂ ಇರಲಿಲ್ಲ.

ಶರಚ್ಚಂದ್ರನು ಮನೆಯೊಳಗೆ ಬರುತ್ತಿರುವಾಗ, ಅವನನ್ನು ಶರತ್ ! ಶರತ್ ! ಎಂದು ಯಾರೋ ಕರೆದಹಾಗಾಯಿತು. ಶರತ್ತು ಉತ್ತರ ಕೊಡದಿರಲು, ಮತ್ತೆ ಶರತ್, ! ಶರತ್ ! ಎಂದು ಧ್ವನಿಯು

ಕೇಳಬಂದಿತು. ಶರಚ್ಚಂದ್ರನು ಚೇತರಿಸಿಕೊಂಡು ತನ್ನನ್ನು ಕೂಗಿದವರಾರೆಂದು ತಿರಿಗಿನೋಡಿದನು. ಇಂದಿರೇಶನು ಅಲ್ಲಿಯೇ ನಿಂತಿದ್ದನು. ಶರತ್ತು ಇಂದಿರೇಶನನ್ನು ನೋಡಿ ಯಾವಮಾತೂ ಆಡದಿರಲು, ಇಂದಿರೇಶನು—ಶರಚ್ಚಂದ್ರ! ಇದೇತಕೆ ಹೀಗೆ ಶೋಚನೀಯವಾದ ದುರವಸ್ಥೆಯನ್ನು ತಾಳಿರುವೆ? ಎಂದು ಕೇಳಿದನು. ಅದಕ್ಕೆ ಶರತ್ತು ಸಮಂಜಸವಾದ ಉತ್ತರಕೊಡದೆ— ಪಾಪಿ! ಚಂಡಾಲ! ದೂರ ತೊಲಗು. ನೀನು ಕುಲಟೆಯಾದ ವಿಸಿಯೂ ಅಕಾಲಮರಣಕ್ಕೆ ಸಿದ್ಧರಾಗಿರಿ. ಹೊರಡು, ಎಂದು ಸಿಂಹಗರ್ಜನೆಯನ್ನು ಮಾಡಿದನು.

ಇಂದಿರೇಶನು ಕೋಪವಿಸ್ಮಯಗಳಿಂದೊಡಗೂಡಿ—ಛಿಃ ಛಿಃ! ಶರಚ್ಚಂದ್ರ! ನಿನಗೆ ಹುಚ್ಚು ಹಿಡಿದಿರುವುದು. ನಿನಗಾರೋ ವಿಷಪ್ರಾಶನ ಮಾಡಿಸಿರುವರು. ಛಿಃ ಛಿಃ! ಎಂದುದಕ್ಕೆ ಶರತ್ತು ಮತ್ತಷ್ಟು ರೇಗಿದವನಾಗಿ— ತೊಲಗು, ಬಾಯಿಗೆಬಂದಂತೆ ಬಗುಳಬೇಡ. ನಿನ್ನ ಇಷ್ಟ ದೈವವನ್ನು ಧ್ಯಾನಮಾಡಿಕೊ, ಎಂದುಸುರಿದನು.

ಇಂದಿರೇಶನು ಮತ್ತೆ ಮಾತನಾಡದೆ, ಶರಚ್ಚಂದ್ರನು ತನ್ನ ಹೆಂಡತಿಯ ನಡತೆಯ ವಿಷಯದಲ್ಲಿ ಸಂಶಯಪಟ್ಟು ಹೀಗೆ ಮಾಡುವಂತಿದೆ, ಆದರೆ ನನ್ನ ಮೇಲೆ ಕೋಪಕ್ಕೆ ಕಾರಣವೇನು? ಈಗ ಶರತ್ತನ್ನು ಮಾತನಾಡಿಸುವುದು ಸರಿಯಲ್ಲವೆಂದು ತಿಳಿದು, ವಿಲಾಸಿನಿಯು ವಿಯೋಗಿನಿಗೆ ಬರೆದ ಕಾಗದಗಳನ್ನು ಅವನಿಗೆ ಕೊಡುವುದಕ್ಕೆ ಹೋದನು. ಶರತ್ತು ಅವನ್ನು ಕಿತ್ತು ದೂರ ಬಿಸುಟನು. ಇದನ್ನುನೋಡಿ ಇನ್ನು ಇಲ್ಲಿರುವುದು ಸರಿಯಲ್ಲವೆಂದು ಇಂದಿರೇಶನು ದೂರಹೋಗಿ ಮರೆಯಾದ ಸ್ಥಳದಲ್ಲಿ ನಿಂತು ನೋಡತೊಡಗಿದನು.

ಶರಚ್ಚಂದ್ರನು ತಾನಿದ್ದ ಸ್ಥಳದಲ್ಲಿಯೇ ಬಹಳ ಹೊತ್ತು ನಿಂತಿದ್ದನು. ಆಗ ಅವನ ದೃಷ್ಟಿಯೆಲ್ಲಾ ಆ ಕಾಗದಗಳ ಮೇಲೆಯೇ ಇತ್ತೆಂದು ಹೇಳಬೇಕಾದುದಿಲ್ಲ. ಅವುಗಳನ್ನು ನೋಡಿ ಅವನು

ಯೋಚಿಸಿದ್ದೇನೆಂದರೆ:— ನಾನು ಕಾಗದಗಳನ್ನು ನೋಡಬೇಕೇ, ಬೇಡವೆ ? ಈ ಕಾಗದದಿಂದ ಯಾರ ತಪ್ಪು ಹೊರಬೀಳುವುದೋ ! ಯಾರು ಪ್ರಕೃತ ಮರಣದಿಂದ ಮುಕ್ತಿ ಲಾಭವನ್ನು ಹೊಂದುವರೋ ! ನಾನು ಈ ಕಾಗದಗಳನ್ನು ನೋಡದೇ ಹೋದರೆ, ತಪ್ಪಿಲ್ಲದವರಿಗೆ ಶಿಕ್ಷೆಯೂ, ತಪ್ಪು ಮಾಡಿದವರಿಗೆ ಶಿಕ್ಷೆಯಾಗದಿರೋಣವೂ ಉಂಟಾಗ ಬಹುದು. ನಿರಪರಾಧಿಗಳನ್ನು ದಂಡಿಸುವಷ್ಟು ಮಹಾಪಾತಕಿಯು ನಾನಲ್ಲ. ನಾನು ಚರಮಕೃತ್ಯವನ್ನು ಮಾಡುವುದಕ್ಕೆ ಮೊದಲು ಕಾಗದಗಳನ್ನು ನೋಡುವುದು ಧರ್ಮ, ಎಂದು ಕಳಗೆ ಬಿದ್ದಿದ್ದ ಕಾಗದಗಳನ್ನು ಸಂಗ್ರಹಿಸಿ ಓದಿದನು.

ಮನೋಬಿನಿ ! ನಾನು ವಿದ್ಯಾನಗರಕ್ಕೆ ಹೋದೊಡನೆಯೇ ಶರಚ್ಚಂದ್ರನ ಮನೆಗೆ ಹೋದೆನು. ಆಗ ಅವನು ಮನೆಯಲ್ಲಿರಲಿಲ್ಲ. ಗೃಹವಾಸಿಯನ್ನು ಕಂಡು ಮಾತನಾಡಿದ್ದರಲ್ಲಿ ಶರತ್ತಿನ ಚರಿತ್ರೆಯು ಕೆಲವು ದಿನಗಳಿಂದೀಚೆಗೆ ಸಮರ್ಪಕವಾಗಿಲ್ಲವೆಂದು ತಿಳಿದು ಬಂದಿತು. ನೀನು ಶರತ್ತನ್ನು ಪ್ರೀತಿಸುವಂತೆಯೇ ಶರತ್ತು ನಿನ್ನನ್ನು ಪ್ರೀತಿಸು ವುದಿಲ್ಲವೆಂಬ ಸಂಗತಿಯು ಮಾತಿನ ಸಂದರ್ಭದಲ್ಲಿ ಗೊತ್ತಾಯಿತು. ಅದಕ್ಕಾಗಿ ನೀನು ಯೋಚಿಸಬೇಡ. ನಾನು ಶರತ್ತನ್ನು ಕಂಡು ಮಾತನಾಡಿದಮೇಲೆ ಉಳಿದ ಸಂಗತಿಗಳಿಗೆ ವಿಶದವಾಗಿ ಕಾಗದ ಬರೆಯುತ್ತೇನೆ.

ವಿಲಾಸಿನಿ.

ಶರಚ್ಚಂದ್ರನು ಈ ಕಾಗದವನ್ನು ಓದಿ, ತಲೆ ತಿರುಗಿದವನಾಗಿ ಅಲ್ಲಿಯೇ ಕುಳಿತುಬಿಟ್ಟು ಆಕಾಶವನ್ನು ನೋಡಿ ಕೈಮುಗಿದು ಇಂತೆಂದನು:—ದೇವ ! ನಿನ್ನಿಂದ ಸೃಷ್ಟವಾದ ಅಪಾರವಾದ ಪ್ರಪಂಚ ದಲ್ಲಿ ನಾನೊಂದು ಅಣುಮಾತ್ರ. ನನ್ನ ಮನಶ್ಶಾಂತಿಗೆ ಭಂಗವುಂಟು ಮಾಡುವುದಕ್ಕೆ ಎಷ್ಟು ಕೃತ್ರಿಮಸಂಧಾನವು ನಡೆಯುತ್ತಿರುವುದೆಂಬು ದನ್ನು ನೀನೊಬ್ಬನೇ ಬಲ್ಲೆ. ಇದರ ತಾತ್ಪರ್ಯ ತಿಳಿಯುವುದಕ್ಕೂ,

ಈ ದುಃಖದಿಂದ ಪಾರಾಗುವುದಕ್ಕೆ ಬುದ್ಧಿ ಕೊಡು, ಶಕ್ತಿ ಕೊಡು, ಮಹಾಪ್ರಭೋ !

ಶರಚ್ಚಂದ್ರನು ಬಳಿಕ ಮತ್ತೊಂದನ್ನು ಓದಿದನು:—

ಪ್ರಿಯಭಗಿನಿ ! ನನ್ನ ಮೊದಲನೆಯ ಕಾಗದದಿಂದ ಶರತ್ತಿನ ನಡತೆಯು ಅಷ್ಟಾಗಿ ಚೆನ್ನಾಗಿಲ್ಲವೆಂಬುದು ಗೊತ್ತಾಗುವುದು. ವಿಚಾರಿಸಿದ್ದರಲ್ಲಿ, ಆತನು ಒಬ್ಬ ಕುಲಚ್ಯುತಳ ಸಹವಾಸದಲ್ಲಿ ಬಿದ್ದು ಓದು ಬರಹಗಳನ್ನು ತ್ಯಾಗಮಾಡಿರುವನು. ವಿದ್ಯಾಲಯಕ್ಕೆ ಅವನು ಹೋದವನೇ ಅಲ್ಲವಂತೆ. ಹೆಸರಿಗೆ ಮಾತ್ರ ಮನೆ ಮಾಡಿರುವನು. ಹಗಲಿರುಳೂ ಇರುವುದು ಆ ಭ್ರಷ್ಟಳ ಮನೆಯಲ್ಲಿ. ಇದಕ್ಕಾಗಿ ನೀನು ಯೋಚಿಸಬೇಡ. ಹೀಗಾದವರಲ್ಲಿ ಎಷ್ಟೋ ಜನರು ಸನ್ಮಾರ್ಗವಲಂಬಿಗಳಾಗಿರುವರು. ಈ ದುಷ್ಕೃತ್ಯವನ್ನು ತಪ್ಪಿಸುವುದಕ್ಕೆ ನಾನು ಯತ್ನಮಾಡಿ ನೋಡುವೆನು. ವಿಲಾಸಿನಿ.

ಇದನ್ನು ಓದಿದಕೂಡಲೆ ಶರಚ್ಚಂದ್ರನಿಗೆ ಹೇಳಲಸಾಧ್ಯವಾದ ಆಗ್ರಹವೂ, ವ್ಯಸನವೂ ಉಂಟಾಗಿ, 'ಮಾನವನು ಪರನಾಶಕ್ಕಾಗಿ ಇಷ್ಟು ಮೋಸಕೆಲಸ ಮಾಡುವನೆಂದು ಯಾರು ಬಲ್ಲರು? ವಿಲಾಸಿನಿ! ಸರ್ವನಾಶಿನಿ ! ನೀನು ತುಚ್ಛವಾದ ಕಾಮಾಭಿಲಾಷೆಯಿಂದ ಈ ಕೆಲಸವನ್ನು ಮಾಡಲುಜ್ಜುಗಿಸಿದೆಯಾ ? ನಿನ್ನೊಬ್ಬಳ ಸುಖಕ್ಕಾಗಿ ನಿರಪರಾಧಿಗಳಾದ ಒಬ್ಬರ, ಇಬ್ಬರ, ಮೂವರ ಶಾಂತಿ, ಸುಖ, ಆಶೆ, ಜೀವನ ಇತ್ಯಾದಿಗಳ ಬಾಯಿಗೆ ಮಣ್ಣು ಹಾಕಿದೆಯಾ ? ಭಗವಂತ ! ನಿನ್ನ ವಿಚಿತ್ರ ಸೃಷ್ಟಿಯ ಮರ್ಮವನ್ನರಿತವರಾರು ? ವಿಲಾಸಿನಿಯಂತಹ ಕಾಲಭುಜಂಗಿಯನ್ನು ಸೃಷ್ಟಿಮಾಡಿ ನಿನಗೇನು ಲಾಭ? ಎಂದು ವ್ಯಸನಪಟ್ಟು ಮತ್ತೊಂದು ಕಾಗದವನ್ನು ಓದಿದನು:—

ವಿನೋದ ! ಈ ದಿನ ಬೆಳಗ್ಗೆ ನಾನು ಬಹಳ ಹೊತ್ತು ಶರತ್ತಿನೊಡನೆ ಮಾತನಾಡುತ್ತಿದ್ದೆನು. ಆತನ ಬಾಯಿಂದ ಹೊರಡುತ್ತಿದ್ದ

ದುರ್ವಾಸನೆಯು ನನ್ನಿಂದ ಸಹಿಸಲಸಾಧ್ಯವಾಯಿತು. ಆತನು ಮದ್ಯ ಕುಡಿಯುವುದನ್ನು ಅಭ್ಯಾಸಮಾಡಿರುವನು. ನಾನು ನಿನ್ನ ವಿಷಯ ಮಾತನಾಡಿದುದಕ್ಕೆ ಆತನು ಬಹಳವಾಗಿ ರೇಗಿದನು. ಆದರೂ ನೀನು ಚಿಂತಿಸಬೇಡ. ನಾನು ಬರುವಾಗ ಆತನನ್ನು ಕರೆದು ಕೊಂಡ ಬರುವೆನು, ವಿಲಾಸಿನಿ.

ಇದನ್ನು ಓದಿ ಶರಚ್ಚಂದ್ರನು, 'ಏನು, ಶರತ್ತು ಮದ್ಯ ಪಾಯಿಯೆ! ವಿಲಾಸಿನಿ! ಸ್ವಾರ್ಥಕ್ಕಾಗಿ ನೀನು ಉಪಯೋಗಿ ಸುತ್ತಿರುವ ಉಪಾಯವು ಸಾಮಾನ್ಯನಾದ ಮಾನವನ ಬುದ್ಧಿಗೆ ಗೋಚರವಾಗದು. ನೀನು ದುರ್ಮಾರ್ಗದಲ್ಲಿ ಅಲ್ಲದೆ ಸನ್ಮಾರ್ಗದಲ್ಲಿ ನಿನ್ನ ಬುದ್ಧಿ ಕೌಶಲವನ್ನು ಉಪಯೋಗಿಸಿದ್ದಲ್ಲಿ, ನೀನು ಅನಂತವಾದ ಕೀರ್ತಿಗೂ, ಫಲಕ್ಕೂ ಭಾಗಿನಿಯಾಗುತಿದ್ದೆ. ನಾನು ವಿನೋದಿನಿಗೆ ಬರೆದ ಕಾಗದಗಳೆಲ್ಲವೂ ಅವಳ ಕೈಸೇರದ ಹಾಗೆ ನೀವಿಬ್ಬರೂ ತಂತ್ರ ಮಾಡಿರುವಿರೆಂಬುದು ನನಗೆ ಈಗ ಗೊತ್ತಾಯಿತು. ನನಗೂ ದೈವ ಯೋಗದಿಂದ ಬುದ್ಧಿ ವೈಕಲ್ಯವುಂಟಾಗಿ ನಿಮ್ಮ ಮಾತಿನಲ್ಲಿ ವಿಶ್ವಾಸ ವಿಡುವ ಕಾಲವು ಬಂದಿತು. ಈಗ ನಾನು ಯಾರನ್ನೂ ಧಿಕ್ಕರಿಸಿ ಪ್ರಯೋಜನವಿಲ್ಲ.' ಎಂದು ವಿಲಾಸಿನಿಯ ಕಾಗದಗಳೆಲ್ಲವನ್ನೂ ದೂರ ಬಿಗೆದು ಸುಮ್ಮನೇ ಕುಳಿತುಕೊಂಡನು. ಮರೆಯಲ್ಲಿದ್ದು ಇದೆಲ್ಲವನ್ನೂ ನೋಡುತಿದ್ದ ಇಂದಿರೇಶನು, ಇದೇ ಸಮಯವೆಂದು ತಿಳಿದು ಮೆಲ್ಲಮೆಲ್ಲನೆ ಶರತ್ತಿನ ಬಳಿಗೆ ಬಂದನು.

ಶರಚ್ಚಂದ್ರನು ಇಂದಿರೇಶನನ್ನು ನೋಡಿ, ಪ್ರತ್ಯುತ್ಥಾನಮಾಡಿ ಗುರುಮಹಾಶಯ! ತಾವು ಇತ್ತಕಡೆ ಬರಬೇಕು. ತಾವೇ ನನಗೆ ಪರಮಗುರು, ತಾವೇ ನನಗೆ ತಾಯಿತಂದೆ, ತಾವೇ ನನಗೆ ಬಂಧು ಬಾಂಧವರು, ತಾವೇ ನನಗೆ ಪರಲೋಕ ಸುಹೃತ್ ತಾವೇ ನನ್ನನ್ನು ಈಗ ಈ ದುರಂತವಾದ ಸಂಕಟದಿಂದ ಉದ್ಧಾರಮಾಡಬೇಕು, ಎಂದು

ನಮಸ್ಕರಿಸಿದನು. ಇಂದಿರೇಶನು ಶರತ್ತನ್ನು ಹಿಡಿದೆತ್ತಿ, ನಡೆದ ಸಂಗತಿಗಳೆಲ್ಲವನ್ನೂ ಕೇಳಿದನು. ಶರತ್ತು ಎಲ್ಲವನ್ನೂ ಹೇಳಿದ ಬಳಿಕ ಇಂದಿರೇಶನು ಇಂತೆಂದನು:—ಶರಚ್ಚಂದ್ರ! ಈ ವಿಷಯದಲ್ಲಿ ನಿನ್ನದೇನೂ ತಪ್ಪಿಲ್ಲ. ಕೆಲವು ಕಾಲದಿಂದಲೂ ವಿಲಾಸಿನಿಯು ಪರ ಮಣಿಯ ಸಹಾಯದಿಂದ ವಿನೋದಳನ್ನು ಹಾಳುಮಾಡಿ, ತಾನೇ ನಿನ್ನ ಹೃದಯದಮೇಲೆ ಆಧಿಪತ್ಯ ಮಾಡಬೇಕೆಂದು ಯತ್ನಮಾಡುತ್ತಿದ್ದ ಳೆಂಬುದು ಈ ಕಾಗದಗಳಿಂದ ವ್ಯಕ್ತವಾಯಿತು. ಇವುಗಳನ್ನು ವಿನೋದಿನಿಯೇ ನನಗೆ ಕೊಟ್ಟಳು. ಇವುಗಳಲ್ಲಿ ನನಗೆ ನಂಬುಗೆ ಯಾಗದಿರಲು, ಇದರ ತತ್ತ್ವವನ್ನು ವಿಚಾರಿಸಬೇಕೆಂದು ಸಮಯ ವನ್ನು ನಿರೀಕ್ಷಿಸುತ್ತಿದ್ದೆನು, ಈಗ ಕಾಲವು ಒದಗಿ ಸಕಲವೂ ಅಭಿ ಪ್ರಾಯವಾಯಿತು.

ಇದಕ್ಕೆ ಶರತ್ತು—ಮಹಾಶಯ! ಲೋಕವನ್ನರಿತ ನಿಮಗೆ ಆಕೆಯ ಕಾಗದದಲ್ಲಿ ನಂಬುಗೆ ಯಾಗದಿರುವುದು ಆಶ್ಚರ್ಯವಲ್ಲ. ಕೇವಲ ಅನಭಿಜ್ಞರಾದ ನಾವು ನೀಚರು ಬೀಸಿದ ಬಲೆಯಲ್ಲಿ ಬೀಳ ದಿರಲು ಹೇಗೆ ಸಾಧ್ಯ? ಎಂದನು.

ಇಂದಿರೇಶ—ಆಗಬೇಕಾದುದು ಆಗಿ ಹೋಯಿತು. ಈಗ ಚಿಂತಿಸಿ ಪ್ರಯೋಜನವಿಲ್ಲ. ನಡೆ, ನಾವಿಬ್ಬರೂ ವಿನೋದಿನಿಯಲ್ಲಿಗೆ ಹೋಗಿ ಆಕೆಯನ್ನು ಸಂತೈಸೋಣ.

ಶರತ್—(ತಲೆವಾಗಿ) ನಾನು ಬಹಳ ಅಕಾರ್ಯಗಳನ್ನು ಮಾಡಿ ರುವೆನು. ಎಲ್ಲವನ್ನೂ ತಾವು ಕ್ಷಮಿಸಬೇಕು. ತಾವು ಮಾಡಿದ ಉಪ ಕಾರಕ್ಕೆ ನಾನು ಪ್ರತ್ಯುಪಕಾರವನ್ನು ಏಳೇಳು ಜನ್ಮಗಳಲ್ಲಿಯೂ ಮಾಡಲಾರೆನು. ತಾವು ನನಗೆ ಧೈರ್ಯವನ್ನಿತ್ತು ಇಲ್ಲಿನವರೆಗೂ ರಕ್ಷಿಸಿದಿರಿ. ಇದಕ್ಕಾಗಿ ನಾನು ತಮಗೆ ಅಕ್ರೀತದಾಸನಾಗಿರುವೆನು.

ಇಂದಿರೇಶ—ಇದರಲ್ಲಿ ನಿನ್ನ ತಪ್ಪೇನೂ ಇಲ್ಲ. ಕಾಲಹರಣ ಮಾಡದೇ ಹೊರಡೋಣ.

ಶರತ್—ಗುರುದೇವ! ನಿನ್ನೆಯದಿನ ನಾನು ವಿನಿಯನ್ನು ಕಾಲಿನಿಂದ ಒದೆದು ತಿರಸ್ಕರಿಸಿದೆನು. ಸಾಧುಮತಿಯಾದ ವಿನಿಯು ಅಷ್ಟಕ್ಕಾಗಿಯೇ ಬಹಳ ಸಂಕಟಪಟ್ಟು ಕೊರಗುತ್ತಿರುವಳು. ಆಕೆಯ ಸ್ಥಿತಿಯನ್ನು ಜ್ಞಾಪಿಸಿಕೊಂಡರೆ, ನನಗೇನೋ ಭಯವಾಗುವುದು.

ಇಬ್ಬರೂ ಈರೀತಿಯಲ್ಲಿ ಮಾತನಾಡುತ್ತಾ ಹೊರಟರು.

## ಹದಿನೈದನೆಯ ಸಂಧಿ.

### ಚರಮೋಪಾಯ.

ಹೊರಗಡೆ ಶರತ್ತಿಗೂ ಇಂದಿರೇಶನಿಗೂ ಹಿಂದಿನ ಸಂಧಿಯಲ್ಲಿ ಕಂಡಂತೆ ಸಂವಾದವು ನಡೆಯುತ್ತಿರುವಾಗ, ಅಂತಃಪುರದಲ್ಲಿನ ದೃಶ್ಯವನ್ನು ಈ ಸಂಧಿಯಲ್ಲಿ ವಿವರಿಸುವೆವು.

ವಿನೋದಿನಿಯು ತನ್ನ ಕೋಟಡಿಯಲ್ಲಿ ಕುಳಿತು ತನ್ನ ದುರ್ದೈವವನ್ನು ಪರಿಪರಿಯಾಗಿ ನಿಂದಿಸುತ್ತಿದ್ದಳು. ಆಗ ಹರಮಣಿಯು ಅಲ್ಲಿಗೆ ಬಂದುದನ್ನು ವಿನಿಯು ನೋಡಿ—ಹರ! ಬಂದುದೇನು? ಎಂದು ಕೇಳಿದಳು.

ಹರ—ಒಂದು ಹೊಸ ಸಮಾಚಾರವನ್ನು ತಂದಿರುವೆನು.

ವಿನಿ—ಇನ್ನೇನು ಸಮಾಚಾರ ?

ಹರ—ನಿನ್ನ ಗಂಡನು ಬೇರೊಬ್ಬಳನ್ನು ಮದುವೆಯಾಗಿ, ಆಕೆಯನ್ನು ಜತೆಯಲ್ಲಿಯೇ ಕರೆದುಕೊಂಡು ಬಂದಿರುವನು. ಅವರಿಬ್ಬರೂ ಸೇರಿ ನಿನಗೆ ವಿಷಹಾಕಿ ಕೊಲ್ಲಬೇಕೆಂದು ನಿಶ್ಚಯಿಸಿರುವರು

ಈಗ ಅವರ ಯತ್ನವು ನಡೆಯುತ್ತಿರುವದು. ನಿನ್ನನ್ನು ಕೊಂದಲ್ಲದೇ ನಿನ್ನ ಯಜಮಾನನು ಜಲಪಾನವನ್ನು ಕೂಡ ಮಾಡುವುದಿಲ್ಲವಂತೆ.

ವಿಸಿ—ನನ್ನ ಗಂಡನ ಕೈಯಿಂದ ಮರಣವೂ ನನಗೆ ಮಂಗಳ.

ಹರ—ಗಂಡನು ಆ ನೀಚಳ ಮೂಲಕ ಕೊಲ್ಲಿಸುವುದಾದರೆ ?

ವಿಸಿ—ಅವರ ಸುಖಕ್ಕಾಗಿ ನಾನೀತರಹ ಸಾಯಬಾರದು ?

ಹರ—ಈ ತರದ ಸಾವಿನಿಂದ ಕೇಡುಂಟು. ಇದಕ್ಕಿಂತಲೂ ಆತ್ಮಹತ್ಯೆ ಎಷ್ಟೋ ಮೇಲಲ್ಲವೆ ?

ವಿಸಿ—ಇದನ್ನು ಕಣ್ಣಿನಿಂದ ನೋಡಿ ಬದುಕುವುದಕ್ಕಿಂತಲೂ ಆತ್ಮಹತ್ಯೆ ಎಷ್ಟೋ ಮೇಲು. ನಾನು ಸಾಯುವುದಕ್ಕೂ ಸಿದ್ಧಳಾಗಿಯೇ ಇರುವೆನು, ಆದರೆ ಸಾಯುವುದು ಹೇಗೋ ಅದು ಮಾತ್ರ ನನಗೆ ತಿಳಿಯದು.

ಹರ—ಸುಖವಾಗಿ ಸಾಯಲು ಎಷ್ಟೋ ಮಾರ್ಗಗಳುಂಟು. ಸಾಯುವುದಕ್ಕೆ ಮನಸ್ಸು ಮಾತ್ರ ಇರಬೇಕು.

ವಿಸಿ—ಹರ! ನೀನು ನನಗೆ ಆ ಉಪಾಯವನ್ನು ಹೇಳಿಕೊಡುವುದಾದರೆ, ನನ್ನ ಒಡವೆಗಳನ್ನು ನಿನಗೆ ಇನಾಮಾಗಿ ಕೊಡುವೆನು. ಆಕೆಯನ್ನು ಕಣ್ಣಿನಿಂದ ನೋಡುವುದಕ್ಕೆ ಮೊದಲೇ ನಾನು ಸಾಯುವುದಕ್ಕೆ ಅನುಕೂಲ್ಯವನ್ನುಂಟುಮಾಡಿ ಕೊಡು.

ಹರ—ನಿಜ ನಿಜ. ನೀನು ಬದುಕಿರುವುದಾದರೆ ಬಹಳ ಕಷ್ಟ. ಅವರೂ ಸಾಯುವುದಾದರೇನು ?

ವಿಸಿ—ಹರ ! ತಡಮಾಡಿದರೆ ಕೆಲಸ ಕೆಡುವುದು.

ಹರ—ವಿನೋದ ! ಬಹಳ ಚೆನ್ನಾಗಿದೆ.

ವಿಸಿ—ನಾನು ಸತ್ತರೆ ನಿನಗಾಗುವುದೇನು ? ಸಂಕಟದಿಂದ ಪಾರಾಗಬೇಕೆಂದು ಸಾಯುವುದಕ್ಕೆ ಸಿದ್ಧಳಾಗಿರುವ ನನ್ನ ಯೋಗಕ್ಷೇಮವು ನಿನ್ನದಾಗಿದ್ದಂತೆ ಸಹಾಯಮಾಡು.

ಹರ—ನನ್ನ ಪರಿಣಾಮಃ ನಾನು ನೋಡಬೇಡವೆ ?

ವಿನಿ—ನಾನು ಇಷ್ಟಪಟ್ಟು ಸಾಯುವಾಗ ಯಾರ ತಪ್ಪೇನಿದೆ?

ಹಾ ! ಸಾವಕಾಶ ಮಾಡಬೇಡ. ನಿನಗೆ ಇಷ್ಟವಿಲ್ಲದಿದ್ದರೆ, ನಾನು ನೇಣುಹಾಕಿಕೊಂಡಾದರೂ ಪ್ರಾಣಬಿಡುವೆನು.

ಹರಮಣಿಯು ವಿನೋದಿನಿಯಿಂದ ಬಹುವಿಧವಾಗಿ ನಿರ್ಬಂಧಿಸಲ್ಪಟ್ಟು, ತನ್ನ ಚರವೋಪಾಯವು ಫಲಿಸಿತೆಂದು ಸಂತೋಷದಿಂದ ಹೊರಗೆ ಹೋಗಿ ಅರ್ಧಗಂಟೆಯೊಳಗಾಗಿ ಹಿಂತಿರುಗಿ ಬಂದು, ಒಂದು ವಿಷದ ಗುಳಿಗೆಯನ್ನು ವಿನಿಯ ಕೈಯಲ್ಲಿಟ್ಟಳು. ವಿನೋದಿನಿಯು ತನ್ನ ಆಭರಣದ ಪೆಟ್ಟಿಗೆಯನ್ನು ತೆಗೆದು ಇಷ್ಟವಾದುದನ್ನು ತೆಗೆದು ಕೊಳ್ಳುವಂತೆ ಹರಮಣಿಗೆ ಹೇಳಿದಳು. ಹರಮಣಿಯು ಒಡವೆಗಳನ್ನು ನೋಡಿ ಕೊಂಚಹೊತ್ತು ಸಮ್ಮನಿದ್ದು ಬಳಿಕ ಬಲಾತ್ಕಾರದಿಂದ ಅಮೂಲ್ಯವಾದ ನಾಲ್ಕೈದು ರತ್ನಾಭರಣಗಳನ್ನು ತೆಗೆದುಕೊಂಡು ತನ್ನ ಮಡಲಲ್ಲಿಟ್ಟು ತಡಮಾಡದೇ ಹೊರಟಳು.

ವಿನಿಯು ವಿಷವನ್ನು ತನ್ನ ಕೈಯಲ್ಲಿಟ್ಟುಕೊಂಡು, ಜಗದೀಶ ! ಈ ಸಣ್ಣ ಪ್ರದೀಪವನ್ನು ನಾನು ಇಷ್ಟಪಟ್ಟು ಆರಿಸಲೆತ್ನಿಸಿರುವೆನು. ಇದರಲ್ಲಿ ಯಾರ ಅಪರಾಧವೇನೂ ಇರುವುದಿಲ್ಲ. ದಯಾಮಯ ! ನಿನ್ನ ದಯೆಗೆ ತುದಿಮೊದಲಿಲ್ಲ. ನೀನು ಮಾನವನಿಗೆ ಅಪರಿಮಿತವಾದ ಯಾತನೆಯನ್ನು ಕೊಟ್ಟಿರೂ, ಅದನ್ನು ನಿವಾರಣೆಮಾಡಿಕೊಳ್ಳುವುದಕ್ಕೆ ತಕ್ಕ ಉಪಾಯವನ್ನೂ ಕೊಟ್ಟಿರುವೆ. ಆದರೂ ಜನರು ಎಂತಹ ಸಂಕಟವನ್ನಾದರೂ ಅನುಭವಿಸುವರೇ ವಿನಾ ಇಂತಹಮಹೌಷಧಗಳನ್ನು ಸೇವನೆಮಾಡಿ ಸಂಕಟಗಳಿಂದ ಪಾರಾಗುವುದಕ್ಕೆ ಇಷ್ಟಪಡುವುದಿಲ್ಲ.

ಶರಚ್ಚಂದ್ರ ! ನಿನ್ನಿಂದ ತಿರಸ್ಕರಿಸಲ್ಪಟ್ಟು ನಾನು ಪ್ರಾಣವನ್ನು ಇಟ್ಟುಕೊಂಡಿರುವೆನೆಂದು ತಿಳಿದಿರುವೆಯಾ ? ಚಂದ್ರ ಸೂರ್ಯರು ಅಂತ

ರಿಕ್ಷದಿಂದ ಕೆಳಗೆ ಬಿದ್ದು ಹೋದರೂ, ಭೂಮಿಯು ತನ್ನ ಕಕ್ಷೆಯಿಂದ ಚ್ಯುತವಾದರೂ, ಸ್ಥಲಜಲಗಳು ಜಲಸ್ಥಲಗಳಾದರೂ ನಾನು ಬದುಕಿರಬಲ್ಲೆನೇ ? ಗಂಡನನ್ನು ಅಗಲಿದ ವಿಸಿಗೆ ಸ್ವತಂತ್ರವಾದ ಜೀವನವೆಲ್ಲಿಯದು ? ಹೇ ಪ್ರಾಣನಾಥ ! ಅನಂತಕಾಲದಲ್ಲಿಯೂ ನಿನ್ನ ಚರಣಸೇವೆಯೇ ನನಗೆ ಲಭಿಸಲಿ. ಈಗ ನಾನು ಸಂತೋಷದಿಂದ ಮುಂದಕ್ಕೆ ತೆರಳುವೆನು ಎಂದು ಹೇಳುತ ಹೇಳುತ ವಿಷದ ಗುಳಿಗೆಯನ್ನು ಅಮೃತದಂತೆಯೇ ಬಾಯಲ್ಲಿ ಹಾಕಿಕೊಂಡು ನುಂಗಿಬಿಟ್ಟಳು.

ಹರಮಣಿಯು ವಿಸಿಯು ಕೋಣೆಯಿಂದ ಹೊರಗೆ ಬರುತ್ತಿರುವಾಗ, ಇಂದಿರೇಶನು ಶರತ್ತನ್ನು ಕರೆದುಕೊಂಡು ವಿನೋದಿನಿಯು ಬಳಿಗೆ ಬರುತ್ತಿದ್ದನು. ಶರಚ್ಚಂದ್ರನು ಇದಿರಿಗೆ ಬರುತಿದ್ದ ನರರಾಕ್ಷಸಿಯಾದ ಹರಮಣಿಯನ್ನು ನೋಡಿ ಕಿಡಿಕಿಡಿಯಾಗಿ—ರಂಡೆ ! ಈಗಲೇ ನಿನ್ನನ್ನು ಕೊಲ್ಲದೇ ಬಿಡೆನು. ನೀನು ನಮ್ಮ ಮನೆಯನ್ನು ಹಾಳು ಮಾಡಲು ಬಂದೆಯಾ ? ಎಂದು ಬಲವಾಗಿ ಒದ್ದನು.

ಹರಮಣಿಯು ಥರಥರ ನಡುಗುತ್ತಾ—ನಾನೇನು ಮಾಡಿದುದು? ನನ್ನನ್ನು ಸುಮ್ಮನೆ ಒದೆಯುವುದಕ್ಕೆ ಕಾರಣವೇನು ? ಎಂದು ಉತ್ತರ ಕೊಟ್ಟಳು.

ಶರತ್—ನೀನೇನು ಮಾಡಿದೆಯಾ ! ಈಗಲೇ ತಿಳಿಸುವೆನು. ಹೆಂಗಸೆಂದು ನಿನ್ನನ್ನು ಸುಮ್ಮನೆ ಬಿಡುವೆನೆಂದು ತಿಳಿದೆಯಾ ? ಸುಳ್ಳು ಹೇಳಿ ಮನೆ ಹಾಳುಮಾಡಿದ ಹೆಂಗಸು ಹೆಂಗಸೇ ? (ಎಂದು ಹೇಳುತ ಎಗರಿ ಎದೆಯ ಮೇಲೆ ಪಕ್ಕಾ ಒದೆಯನ್ನು ಒದ್ದನು.)

ಹರ—(ನಡುಗುತ) ನಾನು ದಾಸಿ. ಸ್ವತಂತ್ರಿಸಿ ನಾನು ಯಾವ ಕೆಲಸವನ್ನೂ ಮಾಡಿದವಳಲ್ಲ. ಇದೆಲ್ಲದಕ್ಕೂ ದೊಡ್ಡಮ್ಮನವರೇ ಉತ್ತರವಾದಿನಿಗಳು.

ಶರತ್—(ಕಣ್ಣುಗಳಿಂದ ಕೆಂಡವನ್ನು ಸುರಿಸುತ್ತಾ) ನಿನ್ನ

ಸಹಾಯವಿಲ್ಲದೆ ವಿಲಾಸಿನಿಯು ಯಾವ ಕೆಲಸವನ್ನೂ ಧೈರ್ಯವಾಗಿ ಮಾಡಲಾರಳು. ಆವುದಕ್ಕೂ ಹೇಸದ ನೀನೇ ನನ್ನ ಮನೆಯನ್ನು ಸುಟ್ಟುಬೂದಿಮಾಡಿದೆ. ನಿನ್ನನ್ನು ಈಗಲೇ ತುಂಡುತುಂಡಾಗಿ ಕತ್ತರಿಸಿ ನಾಯಿ ನರಿಗಳಿಗೆ ಹಾಕದೇ ಬಿಡೆನು.

ಇದನ್ನು ಕೇಳಿ ಹರಮಣಿಯು—ಸ್ವಾಮಿ ! ನನ್ನ ಇಷ್ಟಾನುಸಾರವಾಗಿ ನಾನೇನೂ ಮಾಡಲಿಲ್ಲ. ಆಕೆಯೇ ಎಲ್ಲವನ್ನೂ ಹೇಳಿಕೊಟ್ಟು ಮಾಡಿಸಿರುವಳು. ದಯವಿಟ್ಟು ಕ್ಷಮಿಸಬೇಕು. ನಾನು ತಮ್ಮ ಪಾದದಾಸಿ, ಎಂದು ಹೇಳಿ ಶರತ್ತಿನ ಕಾಲುಗಳ ಮೇಲೆ ಬಿದ್ದಳು. ಆಗ ಮಡಲಲ್ಲಿದ್ದ ಆಭರಗಳು ಝಣ್ ಎಂದು ಕೆಳಗೆ ಬಿದ್ದುವು. ಶರತ್ತು ಇದನ್ನು ಕೈಯಲ್ಲಿ ತೆಗೆದು—ವಿಸಿಯ ಒಡವೆಗಳು ಇಲ್ಲಿ ಬರಲು ಕಾರಣವೇನು ? ಎಂದು ಹರಮಣಿಯ ಮುಂಗೂದಲನ್ನು ಬಲವಾಗಿ ಹಿಡಿದು ಧುಪ್ ಧುಪಾ ಧುಪ್, ಧುಪ್ ಧುಪಾ ಸುಪ್ ಎಂದು ಹೊಡೆದದೇ ಹೊಡೆದನು. ಹರಮಣಿಯು ಹೊಟ್ಟೆಯಲ್ಲಿದ್ದ ಪದಾರ್ಥಗಳೊಡನೆ, ತಾನು ಮಾಡಿದ ಸಮಸ್ತವಾದ ಪಾಪದ ಕೆಲಸಗಳನ್ನೂ ಹೊರಗೆ ಕಕ್ಕಿಬಿಟ್ಟಳು.

ಇಷ್ಟೆನ್ನುವುದರೊಳಗಾಗಿ, ವಿಸಿಯು ಚೀತ್ಕಾರಮಾಡಿದಳು. ಮನೆಯಲ್ಲಿದ್ದವರೆಲ್ಲರೂ ಅವಳ ಬಳಿಗೆ ಓಡಿಬಂದರು. ಶರಚ್ಚಂದ್ರನೂ ಬಂದು ಸೇರಿದನು. ಹರಮಣಿಯು ಮಾತ್ರ ಬಿಟ್ಟರೆ ಸಾಕೆಂದು ಓಡಿ ಹೋಗಿ ಹಿತ್ತಲಲ್ಲಿನ ಬಾವಿಯಲ್ಲಿ ಬಿದ್ದು ಬಿಟ್ಟಳು.

---

# ಹದಿನಾರನೆಯ ಸಂಧಿ.

## ದುಃಖೋಪಸಂಹಾರ.

ವಿನೋದಿನಿಯು ಮರಣೋನ್ಮುಖಪ್ರಾಣಳಾಗಿ ಹಾಸಿಗೆಯಲ್ಲಿ ಮಲಗಿರುವಳು. ಎಲ್ಲರೂ ಸುತ್ತಲೂ ಕುಳಿತುಕೊಂಡು ರೋದನ ಮಾಡುತ್ತಿರುವರು. ಕೊಂಚ ಹೊತ್ತಿನ ಮೇಲೆ ವಿನಿಯು ಕಣ್ಣು ತೆರೆದು ಗಂಡನನ್ನು ನೋಡಿ— ಪ್ರಭೋ! ಕ್ಷಮಿಸು. ಇನ್ನು ಮೇಲಾದರೂ ನೀನು ಸುಖವಾಗಿರು. ನಾನು ಹೋಗಿಬರುವೆನು, ಎಂದಳು.

ಶರಚ್ಚಂದ್ರನ ಬಾಯಲ್ಲಿ ಮಾತಿಲ್ಲ.

ವಿನೋದಿನಿ—ನಾನು ವಿಷಪ್ರಾಶನ ಮಾಡಿ ಸ್ವೇಚ್ಛಾಮರಣವನ್ನು ಬಯಸಿರುವೆನು. ನಾನು ಮತ್ತೆ ಬದುಕುವ ಸಂಭವವಿಲ್ಲ.

ಶರತ್—ನೀನು ಬದುಕುವುದಕ್ಕೆ ಉಪಾಯವಿಲ್ಲದಿದ್ದರೂ, ನಾನು ಸಾಯುವುದಕ್ಕೆ ಉಪಾಯವಿರುವುದು.

ವಿನಿ—(ಗಂಡನ ಕೈಹಿಡಿದುಕೊಂಡು) ಪ್ರಾಣನಾಥ! ನೀನು ದುಡುಕಬೇಡ. ನೀನು ಬದುಕಿರುವುದರಿಂದ ಅನೇಕರಿಗೆ ಸುಖವುಂಟು. ಕಂಟಕಸ್ವರೂಪಳಾದ ನಾನು ಸತ್ತರೆ ಯಾರಿಗೆ ನಷ್ಟ?

ಶರತ್—ಇತರರ ಸುಖವನ್ನು ಕಟ್ಟಿಕೊಂಡು ನನಗಾಗುವುದೇನು? ನಾನು ಯಾರಿಗೋಸ್ಕರ ಬದುಕಬೇಕೆಂದಿದ್ದೆನೋ, ಅವರೇ ಹೋಗುವಾಗ ನಾನಿದ್ದು ಪ್ರಯೋಜನವೇನು?

ವಿನಿ—(ಕ್ಷೀಣಸ್ವರದಿಂದ) ಸ್ವಾಮಿ! ನಾನು ಹೋಗುವೆನು. ಜನ್ಮಾಂತರದಲ್ಲಿಯಾದರೂ ನಿನ್ನ ಸೇವೆಯನ್ನು ಕೊಡು.

ಹೀಗೆ ಹೇಳಿ ವಿನಿಯು ಸುಮ್ಮನಾದಳು. ಆಕೆಯ ಪ್ರಾಣಪಕ್ಷಿಯು ದೇಹ ಪಂಜರವನ್ನು ತ್ಯಾಗಮಾಡಿ ಹಾರಿಯೇ ಹೋಯಿತು.

ಶರಚ್ಚಂದ್ರನು ಆ ಪತಿಗತಪ್ರಾಣಳಾದ ಸಾಧ್ವೀಶಿರೋಮಣಿಯಾದ ವಿನೋದಿನಿಯ ಮೃತದೇಹವನ್ನು ಒಂದು ಸಲ ಆಲಿಂಗಿಸಿ, ಹಾಗೆಯೇ ಮಲಗಿಬಿಟ್ಟನು. ಅವನ ಪ್ರಾಣವೂ ವಿನೋದಿನಿಯನ್ನು ಹಿಂಬಾಲಿಸಿತು. ಅಲ್ಲಿದ್ದವರೆಲ್ಲರೂ ವಿಧವಿಧವಾಗಿ ರೋದನಮಾಡಿದರು. ಏನು ಮಾಡಿದರೂ ಇವರಿಬ್ಬರು ಮಾತ್ರ ಹಿಂತಿರುಗಿ ಒರುವ ಹಾಗಿರಲಿಲ್ಲ. ಇದೆಲ್ಲವನ್ನೂ ಕಣ್ಣಾರೆ ನೋಡುತಿದ್ದ ವಿಲಾಸಿನಿಯು ಉನ್ಮಾದಿನಿಯಾಗಿ ಕಿಲಕಿಲ ನಗುತಲೂ ಧಿಮಿಧಿಮಿ ಕುಣಿಯುತಲೂ ಹೊರಟು ಹೋದಳು.

ಸಂಪೂರ್ಣಂ.